೩೩೮

## ವೈಕುಂಠ ವರ್ಣನೆ

ತತ್ವಸಾರದ ಸೊಬಗ ಧರೆಯೊಳು
ವಿಸ್ತರಿಸಬೇಕೆಂದು ಮುನಿಕುಲ
ರತ್ನ ಶ್ರೀಗುರುವಾದಿರಾಜನು ಶ್ರುತಿಪುರಾಣಗಳ
ಮೊತ್ತವನು ನೆರೆ ಮಥಿಸಿ ಮೇಲಣ
ಮುಕ್ತಿ ಸೃಷ್ಟಿಸ್ಥಿತಿಲಯಂಗಳ
ಅರ್ಥಿಯಿಂದಲಿ ಬಣ್ಣಿಸಿದ ಕಥೆ ಕೇಳಿ ಸಜ್ಜನರು

ಇದು ಪುಣ್ಯಕಥೆ ಲೋಕಕ್ಕಿದೆ ಮುಕುತಿಯ ಪಥ
ಇದ ಕೇಳುವವನೆ ಕೃತಾರ್ಥ
ಇದು ಸರ್ವಸಾಧನ ವಿಧುಗಳಿಗೆ ಸಮ್ಮತ
ಮುದವನೀವುದು ಕೇಳ್ವಜನಕೆ ೧

ಮೇಲೆನಿಪ ನಾಟಿ ಮೊದಲಾದ ರಾಗಂಗಳ
ತಾಳಮೇಳದಿ ನಾಲ್ಕುಸಂಧಿ
ಶ್ರೀಲೋಲನ ಚರಿತೆ ತತ್ವರಹಸ್ಯದ
ಮಾಲೆ ಕೇಳ್ವರಿಗಲಂಕಾರ ೨

ಕನ್ನಡಿಯೊಳಿಪ್ಪಂಥ ಪೂರ್ಣಪ್ರಜ್ಞರ ಮತ
ದುನ್ನತ ತತ್ವಸಾರವನು
ಕನ್ನಡದಿ ಬಣ್ಣಿಸಿದ ವಾದಿರಾಜಮುನಿಯ
ಬಿನ್ನಪವನೆಲ್ಲರು ಮನ್ನಿಪುದು ೩

**ಶ್ಲೋಕ** : ಶ್ಲುಕಾಂಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಂ
ಪ್ರಸನ್ನವದನಂ ಧ್ಯಾಯೇತ್ಸರ್ವ ವಿಘ್ನೋಪಶಾಂತಯೇ

**ಪದ** : ನಿಷ್ಕಳಂಕ ಚಂದ್ರವದನ ಶುಕ್ಲವಸನ
ಲಕ್ಷ ಶಶಿವರ್ಣ ಪ್ರಸನ್ನ
ನಾಲ್ಕುತೋಳಿನ ವಿಷ್ಣು ನಮ್ಮ ವಿಘ್ನಂಗಳ
ಗಕ್ಕನೆ ಒರೆಸಿ ರಕ್ಷಿಸಬೇಕು ೪

**ಶ್ಲೋಕ** : ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಂ
ದೇವೀಂ ಸರಸ್ವತೀಂ ವ್ಯಾಸಂ ತತೋಜಯಮುದೀರಯೇತ್

**ಪದ** : ನರನೆಂದು ಶೇಷನ ಪೆಸರು ನಾರಾಯಣನ
ಮೆರೆವ ಮೂಲರೂಪವೆನಿಪ
ಗುರುವ್ಯಾಸ ನರೋತ್ತಮ ವಾಯು ದೇವಿಲಕುಮಿ
ಸರಸ್ವತಿ ಗ್ರಂಥದೊಡತಿ ಗಡ ೫

ಗ್ರಂಥಮಾಡಿದ ವೇದವ್ಯಾಸ ಮುನೀಂದ್ರನ್ನ

ವೃಂದಾರಕ ಗುರುವೆಂದೊಂದಿಸಿತು
ಇಂದಿರೇಶನೆಂಬ ಮೂಲನಾರಾಯಣನ
ಚೆಂದುಳ್ಳ ಪೆಸರೆಂದೊಂದಿಸಿತು ೬

ವಾಣಿಯ ಬಲಗೊಂಬೆ ಪ್ರಾಣನಾಥನ ಪಾದ–
ಕ್ಕಾನೆರಗುವೆ ರಮೆಯಡಿಗೆ
ಆ ನಮಿಸುವೆ ಹಯವದನ ದೇವೋತ್ತಮನ
ಮಾನಸದಲ್ಲಿಟ್ಟು ನೆನೆವೆ ೭

**ಶ್ಲೋಕ** : ಲಕ್ಷ್ಮೀನಾರಾಯಣಂ ವಂದೇ ತದ್ಭಕ್ತ ಪ್ರವರೋಹಿಯ ಃ
ಶ್ರೀಮದಾನಂದತೀರ್ಥಾಖ್ಯೋ ಗುರುಸ್ತಂಚ ನಮಾಮ್ಯಹಂ

ಏತಾವತಾಲಂ ನನು ಸೂಚಿತೇನ ಗುಣೈರಸಾಮ್ಯೇನತಿ ಶಾಯನೇಸ್ಯ
ಹಿತ್ವೇತರಾನ್ ಪ್ರಾರ್ಥಯತೋ ವಿಭೂತಿ
ರ್ಯಸ್ಯಾಂಘ್ರಿರೇಣುಂ ಜುಷತೇನ ಭೀಪ್ಸೋ ಃ

ಮಿಕ್ಕದೇವರ್ಕಳ ಲೆಕ್ಕಿಸದೆ ಲಕುಮಿ ಮನ
ಉಕ್ಕಿ ಆತಗೆ ಮಾಲೆಯಿಕ್ಕಿದಳು
ಅಕ್ಕರೆಯಿಂದಲಿ ಲಕುಮಿನರೇಯಣರ್ಗೆರಗಿ ತ
ದ್ಭಕ್ತ ಮಧ್ವಮುನಿಗೆ ಶರಣೆಂಬೆ ೮

**ಶ್ರುತಿ** : ತೃತೀಯಮಸ್ಯ ವೃಷಭಸ್ಯ ದೋಹಸೇ
ದಶಪ್ರಮತಿಂ ಜನಯಂತ ಯೋಷಣ ಃ
ಯದೀ ಮನು ಪ್ರದಿವೋ ಮಧ್ವ ಆಧವೇ
ಮಹಾಸಂತಂ ಮಾತರಿಶ್ವಾ ಮಥಾಯತಿ

ಸಿರಿಭೂಮಿ ದುರ್ಗೆಯರು ಜ್ಞಾನಾಮೃತವ ಕರೆವರೆ
ಗುರು ಪೂರ್ಣಪ್ರಜ್ಞರ ಪುಟ್ಟಿಸಿದರು ಗಡ
ನರಲೋಕದ ನಾರಿಗೆ ಇವರ ಹೆರುವ ಭಾಗ್ಯ
ದೊರಕದೆಂದು ಶ್ರುತಿ ಯೋಷಣಯೆಂದಿತು ೯

ದಶಮತಿಯೆಂಬ ಪೆಸರೆಮ್ಮ ಗುರುವರನಿಗೆ
ದಶದಿಶಗಳಲ್ಲಿ ಪ್ರಸಿದ್ಧ ಕಾಣಿರೊ
ಎಸೆವ ಈ ನಾಮವನಿಮಿಷರೊಳೊಬ್ಬರಿಗಿಲ್ಲ
ಋಷಿಗಿಲ್ಲ ಮಾನಿಸರೊಳಿಲ್ಲ
ನಾಮಫಲ ಬಲದಿಂದೆಮ್ಮ ಗುರುವಿಗಿದು ಧರ್ಮ ೧೦

ಪೂರ್ಣಪ್ರಜ್ಞರೆಂಬ ನಾಮ ನಮ್ಮ ಗುರುವರಗುಂಟು
ಉನ್ನತೋಪನಿಷತ್ತು ಸರ್ವವೆಂಬ ಶಬ್ದಕ್ಕೆ
ಪೂರ್ಣವೆಂಬರ್ಥವ ಪೇಳಿತಾಗಿ ದಶಮತಿಯೆಂಬು–
ದನ್ಯನ ಪೇಳುವುದೆ ಮಧ್ವಮುನಿಗಲ್ಲದೆ
ಇನ್ನು ಉತ್ತರೋತ್ತರನೊಲ್ಲದೆ ಪೂರ್ವೋಕ್ತಿಪೇಳ್ವುದೆ ೧೧

ಇದು ದೇವರೊಳು ವೃಷಭನಾದ ವಾಯುದೇವರ

ಸದುಗುಣವುಳ್ಳ ತೃತೀಯ ರೂಪಗಡ
ಬುಧರಿಗೆ ಬೋಧವಿತ್ತು ತುದಿಯಲ್ಲಿ ಮುಕುತಿ ಸಂ–
ಪದವೀವ ಈ ಗುರುವಿಗಿದಿರಾರವ ೧೨

ಮೊದಲದು ಮತಿಯೆಂಬ ಹನುಮಂತರೂಪುಗಡ
ಇದಿರಾದ ಪೃತನೆಗೆ ಕ್ಷಯವನಿತ್ತ
ಕದನಕರ್ಕಶ ಭೀಮ ದ್ವಿತೀಯಾವತಾರ ಗಡ
ತುದಿಯ ರೂಪವಿದೆಂದು ಶ್ರುತಿ ಪೇಳಿತು
ದುರ್ಮತವ ತುಳಿಯಿತು ಕುಮತವನಳಿಯಿತು ೧೩

ಸಂತರ್ಮೆಚ್ಚೆ ವಿದ್ವಾನ್ಮಧ್ವ ಉಜ್ಜಭಾರವೆಂಬ ವೇದ
ಸಂತೋಷದಿ ನಮ್ಮ ಗುರುವ ಕೊಂಡಾಡಿತು
ಇಂತು ಸುಪ್ರಸಿದ್ಧ ಶ್ರುತಿ ತುತಿಸಿದ ಮಧ್ವಮುನಿ
ಎಂಥಾಗುರುವಾದವ ನೀವೆಲ್ಲ ನೋಡಿರೊ
ಮುಕ್ತಿಯ ಬೇಡಿರೋ ಈ ಮತವ ಪಾಡಿರೋ ೧೪

ಮಧ್ವನೆಂಬ ಈ ವಾಯುವೆ ಹೃದ್ಗುಹಾದೊಳಿದ್ದ ಎಲ್ಲಾ
ರಾಳ್ದ ಹರಿ ಸ್ವಾಮಿಯೆಂದು ಮಥಿಸುವರು ಗಡ
ಪೊದ್ದಿ ಇವನ ಪಾದವ ಈಶ ಮೊದಲಾದ ದೇವರು
ಬುದ್ಧಿವಂತರಾದರೆಂದು ಶ್ರುತಿ ಕೀರ್ತಿಸಿತು
ಸುಮತವನರ್ಚಿಸಿತು ಜ್ಞಾನದೀಪ ಹೆಚ್ಚಿಸಿತು ೧೫

ಶ್ರುತಿ ಸ್ಮೃತಿಗಳ ಅರ್ಥಮಥಿಸಿ ಮಾಡಿದ ನಮ್ಮ
ಕೃತಿಯನ್ನೆ ನಂಬಿರೊ ನಾವೆಂದುದೆ ತತ್ವ
ಮತದ ಹಮ್ಮನವ ಮಾಡದಲೆ ಮೇಲಣ ಸ–
ದ್ಗತಿ ಬೇಕೆಂಬುವರೆಲ್ಲರಿದ ಕೇಳಿರೊ ಎಂದೆಂದು ಪೇಳಿರೊ ಕು
ಮತಿಯ ಕೀಳಿರೊ ಅಘಂಗಳ ಸೀಳಿರೊ ೧೬

ಎಲ್ಲ ಇಲ್ಲವೆಂಬುವನ ನಾಲಗೆ ಇಲ್ಲವಾಯಿ
ತಲ್ಲ ಇನ್ನೆಂತು ನಮ್ಮ ಕೂಡೆ ನುಡಿವ
ಬಲ್ಲವರಿಗಿಂತು ಬೋಧಿಸಿ ಜಗತು ಸತ್ಯವೆಂದು
ನಿಲ್ಲಿಸಿದ ಮಧ್ವಮುನಿಗೆಣೆಗಾಣೆ
ಇಂತೆನ್ನದೆ ಮಾಣೆ ಶ್ರೀಹರಿಯಾಣೆ ೧೭

ಈಗ ಉಂಟು ಮೇಗಲಜಗದಿಲ್ಲ ಎಂಬ ಮಾತು ನಿನ
ಗಾಗದಲ್ಲ ತ್ರಿಕಾಲ ನಿಷೇಧವೆಂಬುವಗೆ
ಕಾಗೆಯಂತೆ ಒಂದುಭಾಗದರ್ಥವ ಕಂಡು ಮತ್ತೊಂದು
ಭಾಗವ ಕಾಣದಿರಲು ಕಾಣನೆನ್ನರೆ
ನಿನ್ನಾಧಮನೆನ್ನರೆ ನೋಡು ನೋಡು ಕಣ್ಣಾರೆ ೧೮

ಇಲ್ಲಿಇಲ್ಲವೆನೆ ಇನ್ನೊಂದು ದೇಶದೊಳಕ್ಕು ಈಗ
ಇಲ್ಲವೆನೆ ಇನ್ನೊಂದು ಕಾಲದೊಳಿಪ್ಪುದು
ಎಲ್ಲದೇಶವೆಲ್ಲ ಕಾಲದಲ್ಲಿ ಜಗವಿಲ್ಲವೆನ್ನೆ
ಮೊಲ್ಲನ ಕೊಂಬಿನಂತೆ ಕೇಳಪ್ಪಲ್ಲದೆ ಪೊಕ್ಕು

ಸಲ್ಲದಲ್ಲ ಈ ವಾಕು ಇನ್ನು ಕಲಹ ಸಾಕು ೧೯

ಬಲ್ಲವರು ಸತ್ಯವಾಗಿ ಈ ಜಗವಿಲ್ಲೆಂಬರ್ಥವ
ನೊಲ್ಲರಲ್ಲ ಶ್ರುತಿಯೊಳು ನಿತ್ಯವೆಂಬ ಪದವ
ಇಲ್ಲವಾಗಿ ಇನ್ನೊಂದು ಕಡೆಯಿಂದ ತಂದರೆ ಬಾಯೊಳು
ಕಲ್ಲೆ ಬೀಳುವುದಲ್ಲ ಮಿಥ್ಯವೆಂಬ ಪದವ
ತತ್ವವಾದಿಗಾಗದವ ಉನ್ಮತ್ತನೀನೊರೆವಾ ೨೦

ದ್ವಾಸುಪರ್ಣವೆಂಬ ವೇದ ಭೇಧವನ್ನೆ ಪೇಳಲು ಸ-
ರ್ವೇಶನೆ ನಾನೆಂಬ ಮತದಾಸೆಯೆ ಇಲ್ಲ
ಈಶತನ ಪೋದಮೇಲೆ ಆದೀತೆಂಬ ಮಾತು ವಿಚಾ-
ರಿಸಲೆಕೂಡದು ನಿನಗೋಸುಗ ತನ್ನ
ಈಶತ್ವವನು ಚೆನ್ನಕೇಶವ ಬಿಡುವನೆ ೨೧

ಈ ಶ್ರುತಿಯ ಬಲದಿಂದ ಈಶತೆಯ ಪೋಕಳಿಸುವಾಸೆ ಬೇಡ
ಈಶ ಪೋದಮೇಲೆ ಶ್ರುತಿ
ಈಶನೈಕ್ಯ ಪೇಳ್ವುದೆ ಅವನೀಶ ಪುಸಿಮಾತಿನಿಂದ
ಹೇಸಿಯಿಂತಕ್ಕು ಅನ್ಯೋನ್ಯಾಶ್ರಯ ಸಿಕ್ಕು
ಸಾಕು ಸಾಕು ನಿನ್ನ ಸೊಕ್ಕು ೨೨

ಅಂದು ಭೃಗುಮುನಿ ಬಂದು ಚೆಂದದ ವಕ್ಷವ ಕಾ-
ಲಿಂದಲೊದೆಯಲವನ ಕುಂದ ನೋಡದೆ
ಇಂದಿರೇಶ ತನ್ನ ಸರ್ವೇಶ್ವರತ್ವವ' ರಕ್ಷಿಸಿದ
ನೆಂದು ಕೊಂಡಾಡಿದ ಶ್ರುತಿಯಿಂದ ಹರಿಯ
ತಂದು ತನ್ನಪಕಾರಿಯ ಕುಂದಿಸದೆಂದರರಿಯ ೨೩

ಕಾಲಿಲ್ಲ ಕೈಗಳಿಲ್ಲ ಕರ್ಣಂಗಳಿಲ್ಲ ಕಂಗ
ಳಿಲ್ಲ ನಾಲಗೆಯಿಲ್ಲವೆನ್ನೆ ನೋವ ಮಾನವ
ಈ ಲೋಕದಿ ಚೆಲುವ ಕಾಮನ ಗೆಲುವಾಕಾರದ
ಶ್ರೀಲೋಲನ ನಿರಾಕಾರನೆಂದು ಪೇಳ್ವರೆ
ಸಂತರಿದ ಕೇಳ್ವರೇ ಇಂತೆನಲು ಬಾಳ್ವರೆ ೨೪

ಗುಣಿಯಲ್ಲವೆಂಬ ಮಾತು ನಿನಗೆ ಹೀನವಾದರೆ
ಅನಂತನಿಗೀಮಾತನೆನ್ನಬಹುದೆ
ಜನರು ಮಾಯಾವಿಯೆಂದು ನಿನ್ನೆನೆಮುನಿವ ಮಾನವ
ಸನಕಾದಿಮುನಿಮಾನ್ಯನ ಮಾಯಾವಿ ಎಂಬರೆ
ಬುಧರಿದ ಕೈಗೊಂಬರೆ ಬಾಯೊಳ್ಮಣ್ಣ ತುಂಬರೆ ೨೫

ಇಂತು ಪರಮತವೆಂಬ ಕಂತೆಯ ಪರಿದು ಬಲು
ಭ್ರಾಂತಿಯ ಬಿಡಿಸಿದ ಗುರು ಚಿಂತಾಮಣಿಯ
ಸಂತತ ನೆನೆದು ಅಂತವಿಲ್ಲದ ಪದವ
ಸಂತೋಷತೀರ್ಥರ ಕೃಪೆಯಾಂತೈದುವೆನು
ಅಲ್ಲಿ ಶ್ರೀ ಮಾಧವನು ಈವ ಮೋದವನು ೨೬

ಹತ್ತು ಮತ್ತೆ ನಾಲ್ಕುಲೋಕದ ಜೀವಮೊತ್ತವ ತನ್ನ
ಯುಕ್ತಿಯಿಂದ ಮಾಡಿ ತತ್ತಸ್ಥಾನದಲಿಟ್ಟ
ಸತ್ಯಲೋಕದೊಡೆಯನಡಿಗೆ ಪೊಡಮಡುವೆನು ಹರಿ
ತತ್ವದ ಬಿತ್ತರದರ್ಥಿಯ ತೋರುತಿರಲಿ
ಅತ್ತ ಇತ್ತ ಪೋಗದಂತೆ ಚಿತ್ತವ ತಿರುಹುತಿರಲಿ
ಮುಕ್ತಿಪಥದತ್ತ ಮನವ ನಡೆಸುತಿರಲಿ
ಅರ್ಥಿಯ ಭೃತ್ಯನ ಭಾರ ನಿತ್ಯದಿ ಪೊತ್ತಿರಲಿ ೨೭

ಕಕ್ಕಸ ರಕ್ಕಸರುಕ್ಕ ತಗ್ಗಿಸಿದಂಗೆ ದಕ್ಷನ ಶಿಕ್ಷಿಸಿದವಗೆ
ಯಕ್ಷಪತಿಯ ಸಖನೆನಿಪ ಕೈಲಾಸದ
ಮುಕ್ಕಣ್ಣಗಾನು ಕೈಮುಗಿವೆನು
ಮುಖ್ಯ ಮನಸ್ತತ್ವಾಭಿಮಾನಿಯಾಗೆ ನೀನು
ದುಷ್ಕರ್ಮತತಿ ನಿನ್ನ ಕೃಪೆಯಿಂದ ನೀಗುವೆನು
ಶುಷ್ಕವಾದಿಗಳ ಕಂಡಲ್ಲಿ ನಗುವೆನು
ಭಕ್ಕುತಿ ಪಥವನು ಹಿತವೆಂದು ಬಗೆವೆನು
ನೀನಿತ್ತ ಜ್ಞಾನದಿಂದ ಮುಕ್ತಿಗೆ ಪೋಗುವೆನು ೨೮

ಸಕಲ ಸುರರಂಘ್ರಿಗೆರಗುವೆ ಗುರುಗಳ
ವಿಕಸಿತವಾದ ಪಾದಪದುಮವ ನೆನೆದು
ನಿಖಿಳಜಗವ ಕಾವ ನಾರಾಯಣನ ಕಥೆಯ
ಭಕುತಿಯಿಂದಾನು ಬಣ್ಣಿಪೆನು
ಯುಕುತಿ ಕೋವಿದರ ಕುಣಿಸುವೆನು
ಅಖಿಲ ಕುಜನರನು ದಣಿಸುವೆನು
ಮುಕುತಿಯ ಸುಖವನುಣಿಸುವೆನು
ಈ ಖಳರಮತವ ಮಣಿಸುವೆನು ೨೯

ಇಂದ್ರನ್ನ ರಾಜ್ಯವ ತಂದನ್ನ ಶುಭಗುಣ
ಸಾಂದ್ರನ್ನ ಸುರಸಭಾ ಚಂದ್ರನ್ನ
ನಂದನ್ನಕಂದನ್ನ ವಂದ್ಯನ್ನ ನಿತ್ಯಾ
ನಂದನ್ನ ತುತಿಪೆ ಮುಕುಂದನ್ನ ೩೦

ಶೌರಿಯ ನೆನೆವೆನುದಾರಿಯ ಕುಜನರ
ವೈರಿಯ ಮಂದರೋದ್ಧಾರಿಯ
ಹರಿಯ ದುರಿತನಿವಾರಿಯ ಸುಜನೋಪ-
ಕಾರಿಯ ಮುಕುತಿಗೆ ದಾರಿಯ ೩೧

ನೀಲನ್ನ ನಿಜಜನಪಾಲನ್ನ ನಿರ್ಮಲ
ಶೀಲನ್ನ ಸುಚರಿತ್ರ ಜಾಲನ್ನ
ಬಾಲನ್ನ ಸಂಗೀತಲೋಲನ್ನ ತುತಿಪೆನು
ಕಾಲನವರಿಗೆ ಅನಲನ್ನ ೩೨

ಇಷ್ಟನ್ನ ದುರಿತಾಘರ'ಟ್ಟನ್ನ ಜಗಕತಿ
ದಿಟ್ಟನ್ನ ಸತತ ಸಂತುಷ್ಟನ್ನ
ಶಿಷ್ಟನ್ನ ಶುಭಗುಣ ಪುಷ್ಟನ್ನ ತುತಿಪೆನು-

ತ್ಕೃಷ್ಣನ್ನ ಶ್ರುತಿಗಿಂಬುಗೊಟ್ಟನ್ನ ೩೩

ರಂಗನ್ನ ಕರುಣಾಂತರಂಗನ್ನ ಖಳಕುಲ
ಭಂಗನ್ನ ಮುನಿಜನ ಸಂಗನ್ನ
ಅಂಗಜಾನಂಗನ್ನಜನಕ ನಿತ್ಕಶು-
ಭಾಂಗನ್ನ ತುತಿಪೆನುತ್ತುಂಗನ್ನ ೩೪

**ಶ್ಲೋಕ :** ತರವಃ ಕಿಂ ನ ಜೀವಂತಿ ಭಸ್ತ್ರಾಃ ಕಿಂ ನ ಶ್ವಸಂತ್ಯುತ
ನ ಖಾದಂತಿ ನ ಮೇಹಂತಿ ಕಿಂ ಗ್ರಾಮ್ಯಾಃಪಶವೋಪರೇ
ಬಲೇಬತೋರುಕ್ರಮ ವಿಕ್ರಮಾನ್ಯೇ ನ ಶೃಣ್ವತಃ
ಕರ್ಣಪುಟೀ ನರಸ್ಯ
ಜಿಹ್ವಾ ಸತೀ ದಾರ್ದುರಿಕೇವ ಸೂತ ಸ ಚೇತ್
ಪ್ರಗಾಯತ್ಯುರುಗಾಯ ಗಾಥಾಂ
ಬರ್ಹಾಯಿತೇ ನಯನೇ ನರಾಣಾಂ ಲಿಂಗಾನಿ
ವಿಷ್ಣೋರ್ನನಿರೀಕ್ಷತೋ ಯೇ
ಪಾದೌ ನೃಣಾಂ ತೌ ದ್ರುಮಜನ್ಮ ಭಾಜೌ ಕ್ಷೇತ್ರಾಣಿ
ನಾಮವ್ರಜತೋ ಹರೇರ್ಯೌ

ಹರಿಕಥೆಗಳ ಕೇಳದವ ಬಹುಕಾಲ ಬಾ-
ಳ್ದರೆ ಫಲವೇನು ಕಾನನದ
ಮರ ಸಾಸಿರ ವರುಷವಿರದೆ ಕಾಗೆಯ ಪೆ-
ಸರು ಚಿರಂಜೀವಿಯೆನರೆ ಸಜ್ಜನರು ೩೫

ಕಾರುಕನ ತಿತ್ತಿ ಶ್ವಾಸವ ಬಿಡದೆ
ಊರ ನರಿ ನಾಯಿ ಹಂದಿಗಳು
ಪೂರೈಸಿಕೊಳ್ಳವೆ ತಮತಮ್ಮುದರ
ಮಾರಗೊಳಗಾಗಿ ರಮಿಸವೆ ೩೬

ಮೂಷಿಕನ ಬಿಲದಂತೆ ಹರಿಕಥೆ ಕೇಳಿ ಸಂ-
ತೋಷಿಸದವನ ಕರ್ಣಂಗಳು
ಶ್ರೀಶನ್ನ ಕ್ಷೇತ್ರಕ್ಕೆ ಪೋಗದ ಕಾಲುಗಳು
ಪಾಷಾಣ ಪ್ರತಿಮೆಯಂಘ್ರಿಗಳು ೩೭

ಹರಿಯ ನೋಡದ ಕಣ್ಣು ಹೀಲಿಯ ಕಣ್ಣು
ನರಹರಿಯ ಪಾಡದವನ ಜಿಹ್ವೆ
ವರಲಿಬಳಲುವ ಮಂಡೂಕನ ಜಿಹ್ವೆ
ಹರಿಗೆರಗದ ನರನೆ ವಾನರನು ೩೮

**ಶ್ಲೋಕ :** ತವಾಪ್ಯೇತರ್ಹಿ ಕೌರವ್ಯ ಸಪ್ತಾಹಂ ಜೀವಿತಾವಧಿಃ
ಉಪಕಲ್ಪಯ ತತ್ಸರ್ವಂ ಯತ್ತಾವತ್ಸಾಂಪರಾಯಿಕಂ
ಖಟ್ವಾಂಗೋ ನಾಮ ರಾಜರ್ಷಿರ್ಜ್ಞಾತ್ವೇಯತ್ತಾಮಿಹಾಯುಷಃ
ಮುಹುರ್ತಾಸ್ಸರ್ವಮುತ್ಸೃಜ್ಯ ಗತವಾನಭಯಂ ಹರಿಂ

ಏಳುದಿನ ಹರಿಕಥೆಯ ಕೇಳಿ ಒಬ್ಬ

ದಾಳಿ ಇಡನೆ ಹರಿಪುರಕೆ
ತ್ರಿಲೋಲನ ನೆನೆದೆರಡುಗಳಿಗೆಯೊಬ್ಬ
ಮೇಲಣ ಮುಕುತಿಗೇರನೆ ೩೯

ಅದರಿಂದ ನಾರಾಯಣನ ಕೊಂಡಾಡುವ
ಬುಧರು ಸಂಸಾರವನೊದೆದು
ಮುದದಿಂದ ವೈಕುಂಠಕ್ಕೈದಿ ಶ್ರೀಕೃಷ್ಣನ
ಪದಸನ್ನಿಧಿಯಲಿ ಸುಖಿಸುವರು ೪೦

**ಶ್ಲೋಕ :** ತತೋ ವೈಕುಂಠಮಗಮದ್ಭಾಸ್ವರಂ ತಮಸಃ ಪರಂ
ಯತ್ರ ನಾರಾಯಣಃ ಸಾಕ್ಷಾತ್ ನ್ಯಾಸಿನಾಂ ಪರಮಾ ಗತಿಃ
ಶಾಂತಾನಾಂ ನ್ಯಸ್ತ ದಂಡಾನಾಂ ಯತೋ ನಾವ’ರ್ತತೇ ಯತಿಃ
ವೈಕುಂಠಂ ನಾಮ ಲೋಕಂ ತಂ ದಿವ್ಯಂ ನಿತ್ಯಂ ಸನಾತನಂ

ಸಾಕ್ಷಾನ್ನಾರಾಯಣನಿಪ್ಪ ವೈಕುಂಠವ
ಪೊಕ್ಕು ಬದುಕುವುದೆ ಮೋಕ್ಷ

, ,

ಪಕ್ಷಪಾತವಲ್ಲ ಶುಕಮುನಿವಾಕ್ಯ ವಿ–
ವೇಕಿಸಿ ನೀವೇ ನೋಡಿರೊ ೪೧

ಎಂದೆಂದು ವೈಕುಂಠಲೋಕಕ್ಕೆ ನಾಶವಿಲ್ಲ
ಇಂದಿರೇಶನ ವಿಕುಂಠ
ಚೆಂದದವನ ಮನೆಯೆನಿಪ ವೈಕುಂಠಕ್ಕೆ
ಮಂದಮತಿಯೆ ನಾಶವುಂಟೆ೪೨

ತನ್ನ ಮನೆ ಪೋದಮೇಲೆ ನಾರಾಯಣ
ಬನ್ನಗನಂತೆ ಕಾನನದಿ
ವನ್ನಿತೆಯರ ಕೂಡಿ ಪಣ್ಫಲವ ಮೆಲುವನೆ
ಮನ್ನ ಬಂದಂತೆ ನುಡಿವರೆ ೪೩

ನಶ್ವರವಲ್ಲದ ಈ ಪದವೆ ಬುಧರಿಗೆ
ಶಾಶ್ವತಸ್ನಾನವೆನಿಪುದು
ಭಾಸ್ವರ ವೈಕುಂಠವದರಿಂದ ಎಲ್ಲರ್ಗೆ
ನಿಶ್ಚಿತ ಮುಕುತಿ ಕಾಣಿರೊ ೪೪

ಪರಮಾಂ ಗತಿಯೆಂದು ವೈಕುಂಠದರಸನ ಶ್ರೀ–
ವರನ ಶುಕಯೋಗಿ ವರ್ಣಿಸಿದ
ಅರಿಕೆಯುಳ್ಳ ಬುಧರು ಅದರಿಂದೀ ಪದವನ್ನೆ
ಪರಮ ಮುಕುತಿಯೆನ್ನಬೇಕು ೪೫

ಧನ್ಯ ಯತಿಗಳೀ ಲೋಕವ ಪೊಕ್ಕಮೇಲೆ
ಪುನರಾವೃತ್ತಿ ಇಲ್ಲ ಗಡ
ಇನ್ನೊಂದು ಮುಖ್ಯಮುಕುತಿ ಉಂಟೆಂಬ ಖಳರ

ಮನವ ಮರ್ದಿಸಿತಾಗಿ ೪೬

ನ ಚ ಪುನರಾವರ್ತತೆ ಎಂಬ ವೇದಾಂತ ವ–
ರ್ಣಿಸಿದ ಮುಕುತಿಯ ಬಿಟ್ಟಿನ್ನೊಂದು
ಹೆಸರಿಲ್ಲದ ಮುಕುತಿ ಸಲ್ಲದಾಗಿ ನಮ್ಮ
ಎಸೆವ ವೈಕುಂಠವೆ ಮೋಕ್ಷ ೪೭

ಪೇಳೆಲೊ ವಾದಿ ತಮವೆಂಬ ನಿನ್ನ ಅಜ್ಞಾನ
ಬೀಳುಕೊಟ್ಟು ಲೋಕ ಪುಸಿಯೇ
ಆಲೋಚಿಸಿಕೊ ನಿನ್ನ ಮತದ ರಹಸ್ಯವ
ಈ ಲೋಕವೆ ದಿವ್ಯಮುಕ್ತಿ ೪೮

ಇಂತು ನೋಡಲು ಸರ್ವಪದದ ಸಂಪದ ನಿನಗೆ
ಭ್ರಾಂತಿ ಗಂಟಲ ಗಾಣವಾಯ್ತು
ಹಂತತನವ ಬಿಡು ನಾವೆಂದರ್ಥವನು
ಸಂತೋಷದಿಂದಂಗೀಕರಿಸು ೪೯

**ಶ್ಲೋಕ :** ವೈಕುಂಠನಾಮ ಲೋಕೋಯಂ ದಿವ್ಯಂ ನಿತ್ಯಂ ಸನಾತನಂ

* * *

ಅವೈಷ್ಣವಾನಾಮಪ್ರಾಪ್ಯಂ ಗುಣತ್ರಯವಿವರ್ಜಿತಂ
ನಿತ್ಯಸಿದ್ಧೈಃ ಸಮಾಕೀರ್ಣಂ ತನ್ಮಯ್ಯೈಃ ಪಾಂಚಕಾಲಿಕೈಃ
ಸಭಾಪ್ರಾಸಾದ ಸಂಯುಕ್ತಂ ವನೈಶ್ಚೋಪವನೈರ್ವೃತಂ
ವಾಪೀಕೂಪ ತಟಾಕೈಶ್ಚ ವೃಕ್ಷಷಂಡೈಶ್ಚ ಮಂಡಿತಂ

ಅಪ್ರಾಕೃತಂ ಸುರೈರ್ವಂದ್ಯಂ ಆಯುತಾರ್ಕ ಸಮಪ್ರಭಂ
ಪ್ರಕೃಷ್ಟ ಸತ್ವರಾಶಿಂ ತ್ವಾಂ ಕದಾದ್ರಕ್ಷ್ಯಾಮಿ ಚಕ್ಷುಷಾ

ಬ್ರಹ್ಮಲೋಕ ಪದಾದೂರ್ಧ್ವಂ ಯತ್ಪುರಂ ಚಕ್ರಪಾಣಿನಃ
ಗೋವಿಂದ ಭಕ್ತಿರ್ಮಹತಾಂ ನರಾಣಾಂಚ ನ ಸಂಶಯಃ

ಲೋಕೈಕನಾಥ ನಾರಾಯಣಗೆ ಪ್ರಿಯವಾದ
ವೈಕುಂಠಪುರಿಯ ವರ್ಣಿಪೆನು
ಶ್ರೀಕಾಂತನಲ್ಲಿ ಮುಕ್ತರಿಗೆ ಎಂದೆಂದುನಿ–
ರಾಕುಲ ಸುಖವಿತ್ತು ಪೊರೆವ ೫೦

ಶ್ರೀಕೃಷ್ಣನಂಘ್ರಿಯ ನೆನೆಯದವರಿಗೆ ಈ
ಲೋಕವೆಂದೆಂದು ದೊರಕದು
ಪ್ರಕೃಷ್ಟ ತತ್ವರಾಶಿಗಳಲ್ಲಿಪ್ಪವು ಗಡ
ಪ್ರಾಕೃತವಲ್ಲ ನಿತ್ಯಗಡ ೫೧

ಎಂದೆಂದು ನಿತ್ಯ ಸನಾತನವೆಂಬ ಈ
ಚೆಂದದ ಪದವು ದಿವ್ಯಗಡ
ನಿಂದ್ಯ ತ್ರಿಗುಣಂಗಳು ಹೊಂದವೀ ಲೋಕಕ್ಕೆ

ಕುಂದುಕೊರತೆಯಿಲ್ಲ ಗಡ ೫೨

ಅದರಿಂದ ಬೊಮ್ಮಾದಿ ದೇವರೆಲ್ಲರು ಹರಿಯ
ಸದನವೆನಿಪ ಪುರತ್ರಯಕೆ
ಮುದದಿಂದ ಕೈಮುಗಿದು ಪೂಜಿಸುವರೆಂದೆಂದೀ
ಪದ ನಿತ್ಯ ಸಿದ್ಧಾಸ್ಪದಗಡ ೫೩

ಅಲ್ಲಿದ್ದ ವಾಪಿಕೂಪ ತಟಾಕಂಗಳು ಮ–
ತ್ತಲ್ಲಿದ್ದ ಮನೆ ಉಪ್ಪರಿಗೆಗಳು
ಬಲ್ಲಿದ ರಮೆ ತನ್ನ ನಲ್ಲನ ಚಿತ್ತವ
ವಲ್ಲಿಸಬೇಕೆಂದಿಹಳು ಗಡ ೫೪

ಅರ್ಕಕೋಟಿಗಳಂತೆ ವೈಕುಂಠಲೋಕ ದಶ
ದಿಕ್ಕಿನೊಳಗೆ ಬೆಳಗುವುದು
ಲಕ್ಕುಮಿಗಲ್ಲದೆ ಇಂಥ ಕಾಂತಿ ಮಿಕ್ಕವರಿಗೆ
ಬರ್ಕ್ೇ ನೀವೆ ವಿಚಾರಿಸಿರೊ ೫೫

ವೈಕುಂಠವೆಂಬ ಹರಿಯ ಲೋಕ ಬೊಮ್ಮನ
ಲೋಕಕಿಂತಲು ಮೇಲಿಹುದು
ಶೋಕರಹಿತರಾದ ಸಿದ್ಧಸಾಧ್ಯರಲ್ಲಿ
ಬೇಕಾದ ಸುಖವನುಣುತಿಹರು ೫೬

ಲಕ್ಷಯೋಜನ ಮೇಲಕ್ಕನಂತಾಸನ
ಲಕ್ಷ್ಮೀಶನಿಹ ಶ್ವೇತದ್ವೀಪ
ಲಕ್ಷಐವತ್ತು ವೈಕುಂಠ ಇಪ್ಪತ್ತೈದು
ಲಕ್ಷಷೋಡಶ ಕೋಟಿಯಲ್ಲಿಹುದು ೫೭

**ಶ್ಲೋಕ :** ಸವೈ ಮಹಾಭಾಗವತಃಪರೀಕ್ಷಿದ್ಯೇನಾಪವರ್ಗಾಖ್ಯ ಮದಭ್ರ ಬುದ್ಧಿ ಃ
ಜ್ಞಾನೇನ ವೈಯಾಸಕಿ ಶಬ್ದಿತೇನ ಭೇಜೇ ಖಗೇಂದ್ರಧ್ವಜ ಪಾದಮೂಲಂ

ಜ್ಞಾನಸಾಧ್ಯವಾದ ಮುಖ್ಯ ಮುಕ್ತಿಸ್ಥಾನ
ಶ್ರೀನಾಥನಿಹ ವೈಕುಂಠ
ಯೇನಾಪವರ್ಗಾಖ್ಯಂ ಎಂಬ ಭಾಗವತೋಕ್ತಿ
ತಾನೆ ನಿರ್ಣೈಸಿ ಪೇಳಿತಲ ೫೮

ಇದೆ ಅಪವರ್ಗವೆಂದು ವ್ಯಾಸದೇವನೊಲಿದು ಪೇ–
ಳಿದ ಹರಿಯ ಪಾದವೆ ಮೋಕ್ಷ
ಅಧಮವಾದಿಗಳಿಗೆ ಇದು ಕೇಳಿ ಚಿತ್ತದ
ಮದವಳಿವುದು ಏನಾಶ್ಚರ್ಯ ೫೯

ನಾಡ ಖೋಡಿಗಳು ವ್ಯಾಸವಚನ ನಂಬದೆ
ಮೂಢಗರ್ವರು ಗುರುವೆನಿಪ
ಪ್ರೌಢರಿಗೆ ಸಮ್ಮತವಾದ ವ್ಯಾಸರ ಮಾತ

ನೋಡಿ ಮನ್ನಿಸದಿರೆ ನಗರೆ ೬೦

ಭೇಜೇ ಖಗೇಂದ್ರ ಧ್ವಜ ಪಾದ ಮೂಲಮೆಂ–
ದೀ ಜಗತ್ಖ್ಯಾತ ಭಾಗವತ
ಓಜೆಯಿಂದಲಿ ಪೇಳಿತಾಗಿ ಅನ್ಯರ ಮತ
ರಾಜಿಪುದೆಂತು ಸಭೆಯೊಳಗೆ ೬೧

ಪೇಳೆಲೊ ವಾದಿ ಖಗೇಂದ್ರಧ್ವಜಪಾದ
ಮೂಲ ನಿನ್ನ ಮುಕ್ತಿಯೊಳುಂಟೆ
ಈ ಲಿಂಗ ಹರಿಲೋಕಕ್ಕೆ ಸಾಧಾರಣವೆಂದು
ಬಾಲಕರೆಲ್ಲರ್ಬಲ್ಲರೈಸೆ ೬೨

ಅಲ್ಲಿ ಕೃಷ್ಣನ ಪಾದಸೇವೆಯೆ ಕೈವಲ್ಯ
ವಲ್ಲದೆ ಅವನೈಕ್ಯ ಸಲ್ಲ
ಎಲ್ಲರು ಬಲ್ಲರು ಹರಿಯ ಭೇದ–
ವಲ್ಲದೆಇಲ್ಲವೆಂಬುದನು ೬೩

ಖಗೆಂದ್ರನಾಮವೆ ಅಲ್ಲಿ ತರತಮ ಭಾವ
ಬಗೆಯನರುಹಿತು ಪಾದಶಬ್ದ
ಭಗವಾನ್ ಸಾಕಾರನೆಂದು ವ್ಯಾಸೋಕ್ತಿಗೆ ಕಾಮ
ಧೇನೂಕ್ತಿ ಪ್ರತಿಯೆ ೬೪

**ಶ್ಲೋಕ :** ನ ವರ್ತತೇ ಯತ್ರ ರಜಸ್ತಮಸ್ತ್ಯಯಃಸತ್ವಂ ಚ
ಮಿಶ್ರಂ ನ ಚ ಕಾಲವಿಕ್ರಮಃ
ನ ಯತ್ರ ಮಾಯಾ ಕಿಮುತಾಪರೇ ಹರೇರನುವ್ರತಾ ಯತ್ರ
ಸುರಾಸುರಾರ್ಚಿತಾಃ

ಮುಕ್ತಿಯೊಳಿಹ ಭೇದ ಸತ್ಯವೆಂಬುದು ಸಿದ್ಧ
ಮತ್ತೆ ನ ಯತ್ರ ಮಾಯಾ ಎಂಬ
ಯತ್ರ ಭಾಗವತೋಕ್ತಿ ಮುಕ್ತರ ಭೇದವ
ಸತ್ಯವೆಂದು ಸ್ಥಾಪಿಸಿತಲ್ಲ ೬೫

'ಹರೇರನುವ್ರತಾಯತ್ರ'ವೆಂಬೀಸ್ಮೃತಿ
ನಿರೂಪಿಸಿತು ಹರಿಯ ಭೇದ
ಪರಮಾರ್ಥ ಸತ್ಯ ನಿನಗೂ ಅದೇ ಮಾಯೆ
ಇರದೆ ಕಲ್ಪಿತವಹುದೆ ೬೬

ಈಷನ್ಮಾಯೆ ಇರೆ ಯತ್ರಮಾಯಾ ನೇತಿ
ವ್ಯಾಸನ ಸಾಮಾನ್ಯ ನಿಷೇಧ
ಹುಸಿ ಕೂಡುವುದೆ ಪುಟ್ಟಿದ ಘಟವಿರಲು
ನಾಸ್ತ್ಯತ್ರ ಘಟವೆಂದೆನ್ನುವರೆ ೬೭

ನಿನ್ನಿಚ್ಛೆಗೆ ಬೇಕಾದರ್ಥ ಪೇಳ್ವುದೆ ಶಬ್ದ
ತನ್ನ ಶಕ್ತ್ಯರ್ಥವ ತೊರೆದು

ಎನ್ನಬಹುದ್ಯೆಸೆ ತುಹಿನಪರ ಶಬ್ದ
ವಹ್ನಿಯರ್ಥವನು ನುಡಿವುದೆ ೬೮

**ಶ್ಲೋಕ :** ತನ್ಮಧ್ಯೇ ನಗರೀ ದಿವ್ಯಾ ಸಾಯೋಧ್ಯೇತಿ ಪ್ರಕೀರ್ತಿತಾ
ಆರೂಢಯೌವನೈರ್ನಿತ್ಯಾ ದಿವ್ಯನಾರೀ ನರೈರ್ಯುತಾ

ರತ್ನ ಕೆತ್ತಿಸಿದ ಚಿನ್ನದೇಳು ಕೋಟೆ
ಮನ್ಮಥನಯ್ಯನ ಪುರಿಗೆ
ತನ್ಮಧ್ಯದಲ್ಲಿ ಅಯೋಧ್ಯಾನಗರಿಗೆ ಸು-
ವರ್ಣಗೋಪುರವೊಪ್ಪುತಿಹುದು ೬೯

ಸಿರಿದೇವಿ ತಾನೆ ಮುರಹರನ ಪಟ್ಟಣದೊಳು
ಪರಿಪರಿಯ ಮನೆಯ ರೂಪದಲಿ
ಮಿರಿಮಿರಿ ಮಿಂಚುವಳು ಆಚಲ ಪ್ರಕೃತಿಯಿಂದ
ವಿರಚಿತ ಗೃಹಗಳಲ್ಲಿರವು ೭೦

**ಶ್ಲೋಕ :** ನತದ್ಭಾಸಯತೇ ಸೂರ್ಯೋ ನ ಶಶಾಂಕೋ ನ ಪಾವಕಃ
ಯದ್ಗತ್ವಾನನಿವರ್ತಂತೇ ತದ್ಧಾಮ ಪರಮಂ ಮಮ

ಅನರ್ಘ್ಯ ರತ್ನ ಮಂದಿರದುಪ್ಪರಿಗೆಗಳ
ಬಣ್ಣಿಸಲೆನ್ನಳವಲ್ಲ
ರನ್ನದಾ ದ್ವಾರ ಪ್ರಖರ ಕಾಂತಿಗೆ ತನ್ನಿಂ-
ತಾನೆ ಓಡುವುದಂಧಕಾರ ೭೧

'ಅಯುತಾರ್ಕ ಸಮಪ್ರಭಾ' ಎಂಬ ಪಂಚರಾತ್ರ
ಭಯವಿಲ್ಲದಚ್ಯುತನ ಪುರವ
ಪ್ರಿಯದಿಂದ ಕೊಂಡಾಡಿತಾಗಿ ಆ ಪುರ ಕತ್ತ-
ಲೆಯ ಕೆಡಿಸುವುದೊಂದಚ್ಚರಿಯೆ ೭೨

ನಾಲ್ಕುದಿಕ್ಕುಗಳಲಿ ಬಾಗಿಲ ಸಾಲ್ಗಳು
ಚೌಕ ಶುದ್ಧದ ಕೋಟೆಯೊಳಗೆ
ಲೋಕಪಾಲಕರ ಮನ್ನಣೆಯಿಂದಲಲ್ಲಿಗೆ
ಶ್ರೀಕಾಂತನೊಮ್ಮೊಮ್ಮೆ ಬಾಹ೭೩

'ಸಏನಾನ್ಬ್ರಹ್ಮಗಮಯತಿ' ಎಂಬಶ್ರುತಿ
ನಯದಿಂದ ನಿರ್ಣೈಸಿತಾಗಿ
ಪ್ರಿಯವಾದ ಲಿಂಗದೇಹದ ಜೀವನ್ಮುಕ್ತರು
ಜಯಜಯವೆನುತಿಹರಲ್ಲಿ ೭೪

ಅಪ್ರತೀಕಾಲಂಬನರನು ಮುಖ್ಯಪ್ರಾಣ
ಸಪ್ತ ಪ್ರಾಕಾರಂಗಳೊಳಗೆ
ಮುಕ್ತಿಪರಿಯಂತ ಭೋಗಂಗಳುಂಡುಕೊಂ
ಡಿಪ್ಪಂತೆ ಕಟ್ಟುಮಾಡುವನು ೭೫

ಮುಕ್ತಾಮುಕ್ತರು ಕೂಡಿ ಅದರಿಂದ ಬೆರೆಸಿಹರು
ಸಪ್ತ ಪ್ರಾಕಾರಂಗಳೊಳಗೆ
ಚಿತ್ರ ಚಾವಡಿಯೊಳು ಅಲ್ಲಿದ್ದ ಹರಿಗೆ ಆ
ಮುಕ್ತ ಸುರರು ಬಿನ್ನೈಸುವರು ೭೬

ಮುಕ್ತರಿಗೆ ಮನೆಯಾದ ಹರಿಯಂತಃಪುರದ
ಸುತ್ತಲಿಪ್ಪುದು ವಿರಜಾನದಿಯು
ತತ್ವಜ್ಞಾನಿಗಳು ಅದರೊಳಗೆ ಮುಳುಗೆ ನಿ–
ರ್ಮುಕ್ತವಾಹುದು ಲಿಂಗದೇಹ ೭೭

**ಶ್ಲೋಕ :** ಪ್ರಧಾನಪರಮ ವ್ಯೋಮ್ನೋರಂತರಾ ವಿರಜಾನದೀ
ದೇವಾಂಗ ಸ್ವೇದ ಜನಿತಾ ತೋಯ್ಯೈಃಪ್ರಸ್ರವಿತಾ ಶುಭಾ
ಶ್ರೇಯೋ ಮೋಕ್ಷಪದಂ ದಿವ್ಯಂ ಅಮೃತಂ ವಿಷ್ಣುಮಂದಿರಂ
ಅಕ್ಷರಂ ಪರಮಂ ಧಾಮ ವೈಕುಂಠಂ ಶಾಶ್ವತಂ ಪದಂ
ನಿತ್ಯಂಚ ಪರಮವ್ಯೋಮ ಸರ್ವೋತ್ಕೃಷ್ಟಂ ಸನಾತನಂ
ಪರ್ಯಾಯ ವಾಚಕಾಸ್ತಸ್ಯ ಪರಂಧಾಮ್ನೋಽಚ್ಯುತಸ್ಯ ಚ

ಸಪ್ತಮದ್ವಾರ ಪರಿಯಂತ ಬಂಧಕ ಮಾಯೆ
ಮತ್ತೆ ಮುಕ್ತಿಯೊಳಿಪ್ಪ ಹರಿಯ
ಉತ್ತಮಾಂತಃಪುರದಿಂತೆರಡರ ನಡುವೆ
ಸುತ್ತಲಿಪ್ಪುದು ವಿರಜಾನದಿಯು ೭೮

ಏಳನೆ ಬಾಗಿಲೊಳಿದ್ದ ಜಯವಿಜಯರು
ಭೂಲೋಕದಲಿ ಪುಟ್ಟಿದರಾಗಿ
ಕಾಲನಭಯವೀವ ಪ್ರಕೃತಿ ಆ ಪರಿಯಂತ
ಕಾಲೂರಿ ಜನರ ಕಟ್ಟುವಳು ೭೯

ಅದರಿಂದೊಳಗೆ ಮುಕ್ತರ್ಪೋಗುವರಲ್ಲದೆ ಮಿಕ್ಕ
ಬುಧರಿಗೆ ಸಂಚಾರ ಸಲ್ಲ
ಅದುಕಾರಣ ನಾರಾಯಣನೇ ಬಂದಲ್ಲಿಗೆ
ಮುದವಿತ್ತ ಸನಕಾದಿಗಳಿಗೆ ೮೦

ಹರಿಯಂತರ್ನಗರಿಗೆ ಪರಮಂ ವ್ಯೋಮ ನಾಮ
ಹೊರಗಿದ್ದ ಪ್ರಕೃತಿಯೇ ಪ್ರಧಾನ
ಪುರಾಣಂಗಳದರಿಂದ ಪ್ರಧಾನ ಪರಮವ್ಯೋಮಾಂ
ತರದಿ ವಿರಜೆಯೆಂದೊರೆದವು ೮೧

ಹರಿಯಂಗದೊಳಗಿದ್ದ ಬೆವರೂದಕವಾಗಿ
ಸಿರಿದೇವಿ ತಾನೆ ಪೊರಮಟ್ಟು
ಹರಿವಳು ರಜಶಬ್ದ ಸೂಚಿತ ಗುಣತ್ರಯ
ವಿರದ ಕಾರಣ ವಿರಜೆಯೆನಿಪ'ಳು ೮೨

ಲೆಕ್ಕವಿಲ್ಲದ ಮುಕ್ತಿಯೋಗ್ಯ ಜೀವರನು ಮು–
ಸುಕಿರ್ದ ಪ್ರಕೃತಿಯ ಕೆಡಿಸುವ

ಶಕ್ತಿಯತ್ಯುಕ್ತಿಗೆ ಹರಿಯಂಗಸಂಗದ ಉ–
ದಕ್ಕವಾದಳು ಲಕ್ಷ್ಮೀದೇವಿ ೮೩

**ಶ್ಲೋಕ** : ನಿಃ ಶ್ರೇಯಸಂ ಚ ನಿರ್ವಾಣಂ ಕೈವಲ್ಯಂ ಮೋಕ್ಷ ಉಚ್ಯತೇ
ನಾನಾ ಜಾತಿ ಸಮಾಕೀರ್ಣಂ ವೈಕುಂಠಂ ತದ್ಧರೇಃ ಪದಂ

ವಿರಜೆಯೊಳಗಣ ಪಟ್ಟಣದೊಳು ಮುಕ್ತರು
ವಿರಿಂಚಾದಿ ಸುರರು ಮಾನವರು
ತರುಪಕ್ಷಿ ಮೊದಲಾದ ನಾನಾ ಜಾತಿಗಳಿಹರಿ–
ದರ ಪ್ರಭೆ ತಮಗಿಂಬುಗೊಡದು ೮೪

ಜಾತಿ ಹೀನರೆಂದು ನೀಕರಿಸದಿರಿ ಶ್ರೀ–
ಪತಿ ಮತ್ಸ್ಯ ಕೂರ್ಮ ಆಕೃತಿಯಿಂ
ಖ್ಯಾತನಾಗಿರೆ ಬಲ್ಲವರು ಆ ರೂಪಗಳ
ಓತು ಮನ್ನಿಸಿ ತುತಿಸುವರು ೮೫

ಬೆಲ್ಲದಚ್ಚಿನಿಂದ ಮಾಡಿದ ಕಾಸಾರ
ಸಲ್ಲದೆ ಬಲ್ಲ ಬುಧರಿಗೆ
ಕಲ್ಲೆಂದು ಬಿಡುವರೆ ಮಾಣಿಕ್ಯರತ್ನವ
ಅಲ್ಲಿದ್ದ ಜಾತಿ ಶೋಭನವು ೮೬

ಉರಗ ಗರುಡ ಹಂಸ ಮಹಿಷ ಮೇಷ ವೃಷಭ
ಕರಿ ಮಕರಿ ತುರಗಗಳು
ಸುರರಿಂದ ಮನ್ನಿಸಿಕೊಳವೆ ಶಾಮ ಶಬಳ
ನರರೆಲ್ಲ ನಿರುತ ಪೂಜಿಸರೇ ೮೭

ಉತ್ತರ ಲೋಕದ ನಾನಾ ಜಾತಿಗಳಿಗೆ
ಉತ್ತಮತೆಯು ತಪ್ಪದೆನಲು
ಚಿತ್ತಿನ ಪುತ್ಥಳಿಯಾಗಿ ಮುಕ್ತಿಯೊಳಿರ್ದ
ಚಿತ್ರಜಾತಿಯ ಬಣ್ಣಿಸುವೆನು ೮೮

**ಶ್ರುತಿ** : ಸರ್ವೇ ನಂದಂತಿ ಯಶಸಾಗತೇನ ಸಭಾ ಸಾಹೇನ ಸಖ್ಯಾ ಸಖಾಯಃ
ಕಿಲ್ಬಿಷ ಸ್ಪೃತ್ಪಿತುಷಣಿರ್ಹ್ಯೇಷಾಮರಂ ಹಿತೋಭವತಿ ವಾಜಿನಾಯ
ಋಚಾಂತ್ವ ಃ ಪೋಷಮಾಸ್ತೇ ಪುಪುಷ್ವಾನ್
ಗಾಯತ್ರಂ ತ್ವೋ ಗಾಯತಿ ಶಕ್ವರೀಷು
ಬ್ರಹ್ಮಾತ್ವೋ ವದತಿ ಜಾತ ವಿದ್ಯಾಂ
ಯಜ್ಞಸ್ಯ ಮಾತ್ರಾಂ ವಿಮಿಮೀತ ಉತ್ವ ಃ

ಯತ ಬ್ರಹ್ಮಾಪವಮಾನ ಛಂದಸ್ಯಾಂ ವಾಚಂವದನ್
ಇತ್ಯಾದಿ ವೇದವೇ
ಮುಕ್ತಿಯಲ್ಲಿಪ್ಪ ಬ್ರಹ್ಮಾದಿಜೀವರ
ವರ್ತನೆಯನು ವರ್ಣಿಸುತಲಿದಕೊ ೮೯

ಹರಿಪುರದೊಳಗಿಪ್ಪ ಸಕಲಮುಕ್ತರುಗಳ

ಇರವ ಬಣ್ಣಿಸಿ ಪೊಗಳುವ
ಸರ್ವೇನಂದಂತಿ ಇತ್ಯಾದಿಶ್ರುತ್ಯರ್ಥವ
ಒರೆವೆನು ಕೇಳಿ ಸಜ್ಜನರು ೯೦

ಹೃದಯದ ಪಾಪವ ತೊಳೆವ ಅನ್ನವನೀವ
ಪದುಮನಾಭನು ಮುಕ್ತರುಗಳ
ಕುದುರೆಯಂತೆ ಕುಣಿವ ಕಣ್ಗೆ ಗೋಚರನಾಗಿ
ಒದಗಿಕೊಡುವ ಸುಖಂಗಳನು ೯೧

ಅಲ್ಲಲ್ಲೆ ಪಾಡುವ ಮುಕ್ತರ ಸಭೆಗಳ
ಉಲ್ಲಾಸ ಕಂಡು ತಾ ತಿಳಿವ
ಬಲ್ಲಿದ ಯಶವುಳ್ಳ ಹರಿಯೆಂಬ ಸಥೆಯಿಂದ
ಎಲ್ಲ ಮುಕ್ತರು ಸುಖಿಸುವರು ೯೨

ಒಬ್ಬ ಬ್ರಹ್ಮನು ಋಗ್ವೇದವ ಘೋಷಿಸುವ ಗಡ
ಒಬ್ಬ ಗಾಯತ್ರಿ ಸಾಮವನು
ಉಬ್ಬಿದ ಮನದಿಂದ ಗಾನವ ಮಾಡುವ ಮ-
ತ್ತೊಬ್ಬ ಬ್ರಹ್ಮನು ಪುರಾಣಗಳ ೯೩

ಅಬ್ಜನಾಭನ ಪುರದಿ ಓದುತಿಪ್ಪನು ಗಡ
ಒಬ್ಬ ಶ್ರೀಹರಿಯ ಮೂರ್ತಿಯನ್ನು
ಅಬ್ಬರದಿ ನೆನೆದು ಸುಖಿಸುವನು ಗಡ
ಒಬ್ಬ ಬ್ರಹ್ಮನು ಸೋಮರಸವ ೯೪

&,;ಟಿ, ಛಿ;ಅಬ್ಜನಾಭನಿಗಗ್ನಿ ಮುಖದಿ ಕೊಡುವ ಗಡ
ಒಬ್ಬ ಬ್ರಹ್ಮನು ಪೂಜಿಸುವ ಗಡ
ಸರ್ಬದೇವತೆಗಳು ಈ ಪರಿಯಲ್ಲಿ ಹರಿಯ
ಗರ್ಭವಾಸದಲ್ಲಿ ಇಹರು ೯೫

ಇಂತನಂತ ಬ್ರಹ್ಮಾದ್ಯರು ವೈಕುಂಠದಲ್ಲಿ
ಅಂತರಂತದಲಿಹರೆಂದು
ಮಂತ್ರಗಳು ಕೊಂಡಾಡುತಿವೆ ಅದರಿಂದ ಶ್ರೀ-
ಕಾಂತನ ಮಹಿಮೆಗೇನೆಂಬೆ ೯೬

ಮನೋಜವೇಷ್ವಾ ಸಮಾಬಭೂವುಃ ಎಂಬ
ಚಿನುಮಯರಾದ ಮುಕ್ತರಿಗೂ
ಅನುಭವಿಸುವ ಆನಂದಾದಿಗಳ ತಾರತಮ್ಯ
ವನು ಶ್ರುತಿ ತಾನೆ ಪೇಳಿತಲ್ಲ೯೭

ಅದರಿಂದ ಬೊಮ್ಮಪಟ್ಟದವರೆಲ್ಲರನು
ಮೊದಲಿಗೆ ನೆನೆದವರ ಚೆಂದ
ಪದವಿಯ ಬೇರೆ ಕೊಂಡಾಡಿತು ಶ್ರುತಿ ಮ-
ತ್ತುಳಿದವರನೊಂದಾಗಿ ತುತಿಸಿತು ೯೮

ಹರಿಯರಮನೆಯ ವಾಲಗಶಾಲೆಗೈತಪ್ಪ
ವಿರಿಂಚಿರಾಶಿಗೆ ಲೆಕ್ಕವಿಲ್ಲ
ತೆರತೆರದಲಿ ಬಪ್ಪ ಗರುಡೇಂದ್ರ ಚಂದ್ರಾದಿ
ಸುರರ ತಿಂತಿಣಿಯನೇನೆಂಬೆರ್ಎ

ಪುಟ್ಟಮುನಿಯ ಪೊಟ್ಟೆಯಂಬುಧಿಜಲಕಿಂಬು–
ಗೊಟ್ಟಿತೆನಲು ಸರ್ವೇಶ್ವರನ
ಪಟ್ಟದರಮನೆಯ ಚಾವಡಿ ಬಂದ ಬಂ–
ದಷ್ಟು ಮುಕ್ತರಿಗೆ ತಾನಿಂಬುಕೊಡದೇ ೧೦೦

ಒಂದೊಂದು ಕಲ್ಪದಲಿ ಮುಕ್ತರಾದಮರರು
ಚೆಂದ ಚೆಂದದಲಲ್ಲಲ್ಲಿಹರು
ಇಂದಿರೆಯೋಲಗದಿ ವಾಣಿಮೊದಲಾದ
ಇಂದುಮುಖಿಯರೊಪ್ಪಿಹರು೧೦೧

ಅವರ ಲಾವಣ್ಯವ ಅವರ ತಾರುಣ್ಯವ
ಅವರುಟ್ಟ ಚಿತ್ರಾಂಬರವ
ಅವರ ಸರ್ವಾಂಗ ದಿವ್ಯಾಭರಣಂಗಳ
ವಿವರವನಾವ ಬಣ್ಣಿಸುವ ೧೦೨

**ಶ್ಲೋಕ :** ಇದಂ ಜ್ಞಾನಮುಪಾಶ್ರಿತ್ಯ ಮಮ ಸಾಧರ್ಮ್ಯಮಾಗತಾಃ
ಸರ್ಗೇಽಪಿ ನೋಪಜಾಯಂತೇ ಪ್ರಳಯೇ ನ ವ್ಯಥಂತಿ ಚ
ಸರ್ವೇಚತುರ್ಬಾಹವ ಉನ್ಮಿಷನ್ಮಣಿ ಪ್ರವೇಕ ನಿಷ್ಕಾಭರಣಾಃ ಸುವರ್ಚಸಃ
ಪ್ರವಾಳ ವೈಢೂರ್ಯ ಮೃಣಾಲ ವರ್ಚಸಃ ಪರಿಸ್ಫುರತ್ಕುಂಡಲಮೌಳಿ
ಮಾಲಿನಃ

ಇಟ್ಟ ಮಕುಟಂಗಳ ತೊಟ್ಟಂಗಿತೋಳ್ಗಳ–
ವಟ್ಟ ಸರ ಹಾರ ಪದಕಗಳ
ಉಟ್ಟ ಪೊಂಬಟ್ಟೆಗಳ ಕಂಕಣಾಂಗದಗಳ
ಮೆಟ್ಟಿದ ಪೊನ್ನ ಪಾವುಗೆಯ೧೦೩

ಪೊಳೆವ ಕುಂಡಲಗಳು ಉಲಿವ ಕಿಂಕಿಣಿಗಳು
ನಳನಳಿಸುವ ನ್ಯಾವಳಗಳು
ನಲಿವ ಅಂದುಗೆಗಳು ಮುಕ್ತರ ದಿವ್ಯಾಂಗ
ಚೆಲುವನದಾವ ವರ್ಣಿಸುವ ೧೦೪

ಕರಚತುಷ್ಟಯದ ಮುಕ್ತರು ಕೃಷ್ಣನೊಡನಲ್ಲಿ
ಸರಿಬೆರೆಸಿಹ ಸಮಯದಲ್ಲಿ
ಉರದ ಸಿರಿವತ್ಸ ಕೌಸ್ತುಭದ ಕುರುಹು ಕಂಡು
ಹರಿಯಿವನೆಂದರಿವರು ಗಡ೧೦೫

ವಿರಿಂಚಿ ಕೈಮುಗಿಯಲು ಗರುಡನೇರಿ ಬರಲು
ಉರಗನ ಮಂಚದೊಳಿರಲು
ಅರಿವರು ಅಲ್ಲದಿರ್ದೊಡೆ ಸಾರೂಪ್ಯದ ಮುಕ್ತಿ

ತೆರೆವಡಿಸಿ ನೋಡಲೀಯದು ಗಡ ೧೦೬

ಸಾಯುಜ್ಯ ಸಾಲೋಕ್ಯ ಸಾಮೀಪ್ಯ ಸಾರೂಪ್ಯ
ಈಯಂದ ಚತುರ್ವಿಧಮುಕ್ತಿ
ಹೇಯ ಲಿಂಗದೇಹ ಪೋದ ಮೇಲವರವರ
ಸ್ವಾಯೋಗ್ಯತೆಯಿಂದೊಪ್ಪುವುದು ೧೦೭

ಶ್ರೀಕಾಂತನಂಗವ ಮುಟ್ಟಿಕೊಂಡಿಪ್ಪುದೆ
ಬೇಕಾದ ಸಾಯುಜ್ಯಮುಕ್ತಿ
ಈ ಕುಜನರೆಂಬೈಕ್ಯವ ಯುಜಿರ್ಯೋಗೇ ಎಂಬ
ವ್ಯಾಕರಣೋಕ್ತಿ ಬಿಡಿಸಿತಲ್ಲ ೧೦೮

ಹರಿಯಂಗವಾಶ್ರೈಸಿ ಅಲ್ಲಿಪ್ಪ ಅವರ
ಪರಗತಿಯದರ ಮೇಲೆ ಮುಕ್ತಿಯೊಳು
ತೆರತೆರದಲ್ಲಿ ಸಿರಿಮೂರ್ತಿಯಲಿಪ್ಪ'ರಾಗೀ–
ಪರಿ ಸುರರೇ ಸಾಯುಜ್ಯಾರ್ಹರು ೧೦೯

ಇದ್ದ ಮುಕ್ತಿಗಳಲ್ಲಿ ಭೇದ ಉಂಟೆಂಬುದು
ಸಿದ್ಧ ಸಕಲ ವಾದಿಗಳಿಗು
ಶಬ್ದೋಕ್ತಿಯಿಂದಲಿ ಭೇದಬಂದಿತಾಗಿ
ಬಿದ್ದು ಹೋಯಿತು ಪರಸಿದ್ಧಾಂತವು ೧೧೦

ಸಾಲೋಕ್ಯ ಹರಿಲೋಕದೊಳಗೆ ತುಂಬಿಪ್ಪುದೆ
ಆಲೋಕದ್ಹತ್ತಿಲಿ ಸುತ್ತ
ಪಾಲಸಾಗರದಲ್ಲಿ ಸುಖಿಸುವ ಜೀವರ
ಪಾಲಿಗೆ ಸಾಮೀಪ್ಯಕಾಣಿರೋ ೧೧೧

ಶ್ರೀವತ್ಸಕೌಸ್ತುಭ ಹೊರತಾಗಿ ಹರಿಯಂತೆ
ಆವಾಗ ಕರಚತುಷ್ಟಯದಿ
ಪಾವನ ಶಂಖಚಕ್ರಾದಿಗಳ ಧರಿಸಿಹ
ಜೀವರ್ಗೆ ಸಾರೂಪ್ಯ ಮುಕ್ತಿ ೧೧೨

ಸಾರೂಪ್ಯವೆಂಬೋದು ಸರ್ವರಿಗು ಸರಿ ಎಂದು
ಮೂರುಮುಕ್ತಿಯಿಂದ ಹೊರಗೆ
ಸಾರೂಪ್ಯಮುಕುತೆಂದು ಪಿರಿಯರು ಕರೆವರು
ಬೇರೆಬೇರವರಿಗಿರವು ಗಡ ೧೧೩

ಮೂರು ಶಾಕವ ಮಾಡಿ ಲವಣ ಕೂಡಿಸಿದರು
ಮೂರು ಶಾಕವೆಂದು ಕರೆವರೈಸೆ
ಬೇರೆಬಡಿಸಿದ ಲವಣ ಲವಣವೆಂದೆನಿಪುದು
ಈ ರೀತಿಯಹುದು ಸಾರೂಪ್ಯ ೧೧೪

ಶ್ರೀಲೋಲನಾಜ್ಞೆ ಈ ಸತ್ಯಲೋಕಗಳಲ್ಲಿ
ನೆಲೆಸಿದಂಥ ಮುಕುತರಿಗೆ

ಆಲಸ್ಯ ಹಸಿ ತೃಷೆ ಕಾಲಕರ್ಮದ ಕೋ–
ಟಲೆಗಳು ತುಡುಕಲಮ್ಮವು ಗಡ ೧೧೫

ದಿವ್ಯಭೋಗಂಗಳ ಲೀಲೆಯಿಂದುಂಬುವರು
ದಿವ್ಯಗೀತೆಗಳ ಪಾಡುವರು
ದಿವ್ಯಗಂಧ ಪರಿಮಳಂಗಳ ಪೂಸುವರು
ದಿವ್ಯನಾರೀ ನರರಲ್ಲಿ ೧೧೬

ಜ್ಯೋತಿರ್ಮಯದ ಹೆಣ್ಣುಗಂಡುಗಳು ಅಪ್ರಾ–
ಕೃತ ದೇಹಗಳಲ್ಲಿ ಇಹವು
ಪ್ರೀತಿಯಿಂದೊಮ್ಮೊಮ್ಮೆ ಅವರೊಳು ಪೊಕ್ಕು ನಾ–
ನಾ ತೆರದಲಿ ಸುಖಿಸುವರು ೧೧೭

ಮುಕ್ತರ ಭೋಗಕ್ಕೆ ತಕ್ಕ ಫಲಂಗಳ
ಹೊತ್ತುಹೊತ್ತಿಗೆ ಕೊಡುತಿಪ್ಪ
ನಿತ್ಯಾಪ್ರಾಕೃತವಾದ ಚಿತ್ರವೃಕ್ಷಗಳಲ್ಲಿ
ಸುತ್ತಮುತ್ತಲೊಪ್ಪಿಹವು ೧೧೮

ನಿತ್ಯನಿರ್ದುಃಖ ಸುಖಸ್ವರೂಪರಾಗಿ
ಸುತ್ತ ಸುಳಿವರು ಲೀಲೆಯಲ್ಲಿ
ನಿತ್ಯಾಪ್ರಾಕೃಕ ಫಲಂಗಳವರ್ಗೆ ಸುಖವನಿತ್ತು
ಮತ್ತೆ ಮುನ್ನಿದ್ದಲ್ಲೆ ಇಹವು ೧೧೯

ಇದು ಚಿತ್ರವಲ್ಲ ತುಂಡ್ರಿಸಿ ಶಾಖಂಗಳ ಮಾಡಿ
ಕುದಿಸಿ ವಿಪ್ರರ್ಗೆ ಉಣ್ಣಿಸಿದ
ಚದುರ ವಾತಾಪಿ ತಮ್ಮಣ್ಣ ಕರೆದಾಗಲೆ
ಮೊದಲಿನಂತೆ ಬಾಹ ಕಂಡ್ಯ೧೨೦

**ಶ್ಲೋಕ :** ಭ್ರಾಜಿಷ್ಣುಭಿರ್ಯಃ ಪರಿತೋ ವಿರಾಜತೇ
ಲಸದ್ವಿಮ ನಾವಳಿಭಿರ್ಮಹಾತ್ಮನಾಂ
ವಿದ್ಯೋತಮಾನ ಪ್ರಮದೋತ್ತಮಾಭಿಃ
ಸವಿದ್ಯುದಭ್ರಾವಳಿಭಿರ್ಯಥಾ ನಭಃ

ಒಪ್ಪುವ ವಿಮಾನವೇರಿ ಮೆರೆವರು ಕಂ
ದರ್ಪನ ಕೇಳಿಯಲ್ಲಿಹರು
ತಪ್ಪರು ಧರ್ಮಮಾರ್ಗವನು ಅಧರ್ಮ ತೊಲ–
ಗಿಪ್ಪುದು ಅವರ ಸ್ವಭಾವ ೧೨೧

ಚಿತ್ರದಿ ಬರೆದ ಹೆಣ್ಣುಗಂಡಂತೆ ಅ–
ನ್ಯ ಸ್ತ್ರೀಯರಲ್ಲಿ ಮುಕ್ತರಿಗೆ
ಚಿತ್ತವೆರಗದು ತಮ್ಮತಮ್ಮ ಸ್ತ್ರೀಯರಲ್ಲಿ
ಅರ್ಥಿಯ ಮಾಡುವರೈಸೆ ೧೨೨

ತಾಯ ಸೊಬಗ ಕಂಡಕಂಡಾಗ ಮಕ್ಕಳು

ನ್ಯಾಯಪಥವನು ಬಿಡುವರೆ
ಶ್ರೀಯಿಂದ ಮಿಂಚುವ ಮಗಳ ಕಂಡರೆ ಪಿತ
ಕಾಯಜಶರಕೊಳಗಾಗುವನೆ ೧೨೩

ಚೆಲುವ ತಂಗಿಯ ಕಂಡರೊಡಹುಟ್ಟಿದರಮನ
ವಳುಕುವುದೆ ಪಾಪಪಥಕೆ
ಕಲಿಗೊಳಗಾದವರಿಗೀ ಮಾರ್ಗವಿರೆ ನಿ–
ರ್ಮಲ ಮುಕ್ತರಿಗೆ ದ್ರೋಹ ಬಹುದೆ ೧೨೪

**ಶ್ಲೋಕ :** ಆನಂದಾನ್ಮಂದಮಂದಾ ದದತಿ ಹಿ ಮರುತಃ
ಕುಂದ ಮಂದಾರ ನಂದ್ಯಾವರ್ತಾಮೋದಾನ್ ದಧಾನಾ
ಮೃದುಪದಮುದಿತೋದ್ಗೀತಕೈಃ ಸುಂದರೀಣಾಂ
ವೃಂದೈರಾವಂದ್ಯ ಮುಕ್ತೇಂದ್ವಹಿಮಗು ಮದನಾ
ಹೀಂದ್ರ ದೇವೇಂದ್ರಸೇವ್ಯೇ ಮೌಕುಂದೇ
ಮಂದಿರೇಸ್ಮನ್ನವಿರತಮುದಯನ್ಮೋದಿನಾಂ ದೇವದೇವ

ಕುಂದಮಂದಾರ ಮಲ್ಲಿಗೆ ನಂದಾವರ್ತಾರ
ವಿಂದದಲ್ಲೆಸೆವ ಸೌರಭದ
ಗಂಧವಾಹನನಲ್ಲಿ ಬೀಸುವ ಮುಕ್ತರಾ–
ನಂದಕ್ಕೆ ನಿತ್ಯ ಸುಖವೀವ ೧೨೫

ಚಂದನದ ರಸ ಪೂಸಿದ ಮೈಯೊಳು
ಹೊಂದಿದ ಮೋದ ಶೈತ್ಯವನೆ
ಮಂದಮಾರುತ ಬಂದು ವ್ಯಕ್ತಮಾಡಿಸುವದ
ರಿಂದ ಮುಕ್ತರ ಭೋಗಗಳಿಗೇ ೧೨೬

ಮತ್ತ ನರ್ತನದಂತೆ ಶಕ್ತ ನೃಪಾಲಗೆ
ಭೃತ್ಯನ ಕೈಲಾಗಿನಂತೆ
ಮುಕ್ತರ ಭೋಗಂಗಳಪ್ಪುವು ಹರಿಯಲ್ಲಿ
ಚಿತ್ರಚಾರಿತ್ರಲೀಲೆಗಳು ೧೨೭

ನಿತ್ಯತೃಪ್ತನು ಕೃತಕೃತ್ಯನಚ್ಯುತ ಗಡ
ಮುಕ್ತರೆಲ್ಲ ಪ್ರಕಾಮರು ಗಡ
ಇತ್ತ ಇವರಾಟವ ಅತ್ತ ಶ್ರುತಿಪಾಠವ
ವ್ಯರ್ಥಮಾಡದವ ಜಾಣ ೧೨೮

ಅದರಿಂದ ತಮ್ಮ ನಿತ್ಯಾನಂದ ತಪದಂ–
ತೊದಗಿದ ವಿಷಯರಾಶಿಗಳ
ಮದನನಯ್ಯನ ಪುರದೊಳಗಿದ್ದ ಮುಕ್ತರು
ಮುದದಿಂದ ಸೇವಿಪರೈಸೆ ೧೨೯

ಅರ ಎಂದು ಣ್ಯ ಎಂದು ಅಲ್ಲಿ ಸುಧೆಸಾ–
ಗರವೆರಡೆಂದೆಂದಿಪ್ಪುವುಗಡ
ಸರಸ ಲೀಲೆಯಿಂದ ಅದರ ರಸವನು ಮು–

ಕ್ತರು ಬಂದಾಸ್ವಾದಿಸುವರು ಗಡ ೧೩೦

ಒಂದು ಅಶ್ವತ್ಥವು ಚೆಂದದಮೃತರಸವ
ಎಂದೆಂದು ಕರೆಯುತಿಪ್ಪುದು ಗಡ
ಬಂದದನೊಮ್ಮೊಮ್ಮೆ ಮುಕುತರು ತಮ್ಮ ಮನ
ಬಂದಂತಾಸ್ವಾದಿಸುವರು ಗಡ ೧೩೧

ಶುದ್ಧಪ್ರಾಕೃತವಾದ ಷಡ್ವಿಧ ರಸವುಳ್ಳ
ಸ್ವಾದ್ವನ್ನಗಳ ಕೊಡುತಿಪ್ಪ
ಹೃದ್ಯನದಿಗಳು ಸುತ್ತ ಪರಿವುವು
ಪದ್ಮನಾಭನ ಪುರದೊಳಗೆ ೧೩೨

ಸರ್ಪಿಪಾಯಸವೆಂಬ ಕರ್ದಮಂಗಳ ಕೂಡಿ
ಒಪ್ಪುವ ಭಕ್ಷ್ಯಭೋಜ್ಯಗಳ
ತೋರ್ಪ ಅಮೃತನದಿಗಳಲ್ಲಿ ಪರಿವುದ–
ನೊಪ್ಪುಗೊಂಬರು ಲೀಲೆಯಿಂದ ೧೩೩

ವಾಪಿ ಕೂಪ ತಟಾಕಂಗಳಿಹವು ನಾ–
ನಾ ಫಲವೆರಸಿದ ತರುಗಳು
ತೋಪುಗಳಲ್ಲಿ ಒಮ್ಮೊಮ್ಮೆ ಇವರು ನಾ–
ನಾಪರಿ ಕ್ರೀಡೆಯಾಡುವರು ೧೩೪

ನಿತ್ಯಾಪ್ರಾಕೃತವಾದ ಚತುರವಿಧನ್ನಗಳಿಂ
ತುತ್ತನೊಮ್ಮೊಮ್ಮೆ ಸೇವಿಪರು
ಸತ್ತಿಗೆವಿಡಿವರು ಚಾಮರಂಗಳನಲ್ಲಿ
ಭೃತ್ಯರವರಿಗೆ ಬೀಸುವರು ೧೩೫

ಮಕ್ಕಳೆತ್ತಿಕೊಂಬ ತಾಯಿ ಸುಖದಿಂದ
ಉಕ್ಕುವಂತಲ್ಲಿ ಸೇವಿಪರ
ಭಕ್ತಿಭರಿತಚಿತ್ತ ಉಬ್ಬಿಕೊಬ್ಬಿದರೆ ಸೌ–
ಖ್ಯಾಬ್ಧಿಯು ತುಳುಕುವುದೈಸೆ ೧೩೬

ಪಾಲುಂಬ ಸವಿಗಿಂದ ಸಕ್ಕರೆಗೂಡಿದ
ಪಾಲುಕುಡಿವ ಸುಖ ಮೇಲು
ಲೋಲಾಕ್ಷಿಯರ ನೋಳ್ಪ ಸುಖದಿಂದವರಂಗ–
ದಾಲಿಂಗನದ ಸುಖ ಮೇಲು ೧೩೭

ಇಂತು ಮಹಂತರ ಸುಖಮೇಲು ಮುಕ್ತಿಯೊ–
ಳಂತರಂತರದಿ ಸೇವಿಪರ
ಸಂತೋಷ ತಾರತಮ್ಯದಲಿಪ್ಪುದೆಂದು ವೇ–
ದಾಂತದಿ ಹಯವದನನೊರೆದ ೧೩೮

ವೈಕುಂಠವೆಂದೆಂಬ ತನ್ನ ಪುರಕಥೆಯ ಪ–
ರಾಕುವಿಟ್ಟು ಕೇಳುವರ

ಶ್ರೀಕಾಂತ ಕಾವನೆಂಬಲ್ಲಿ ಮೊದಲ ಸಂಧಿ
ಈ ಕಾವ್ಯದೊಳಗೆ ಮುಗಿಯಿತು ೧೩೯

ಶ್ರೀಧರ ಹಯವದನರಾಯನ ದಯದಿಂದ
ವಾದಿರಾಜೇಂದ್ರ ರಚಿಸಿದ
ಈ ದಿವ್ಯಕಾವ್ಯದಿ ಮುಕ್ತಿಯೊರೆವ' ರಮ್ಯ
ವಾದ ಮೊದಲಸಂಧಿ ಪೊಸಬಗೆ ೧೪೦

# ಶ್ರೀವಾದಿರಾಜರ ದೀರ್ಘಕೃತಿಗಳು

**ಸೃಷ್ಟಿ ಸಂಧಿ**

ಇದು ಪುಣ್ಯಕಥೆ ಲೋಕಕ್ಕಿದೆ ಮುಕುತಿಯ ಪಥ
ಇದ ಕೇಳುವವನೆ ಕೃತಾರ್ಥ
ಇದು ಸರ್ವಸಾಧನ ವಿಧುಗಳಿಗೆ ಸಮ್ಮತ
ಮುದವನೀವುದು ಕೇಳ್ವ ಜನಕೆ ೧

**ಶ್ಲೋಕ :** ಆಸೀದೇಕೋ ಹ ವೈಚಾತ್ರ ವಿಷ್ಣುರ್ನಾರಾಯಣಾಹ್ವಯಃ
ನ ಬ್ರಹ್ಮಾ ನ ಚ ರುದ್ರಶ್ಚ ನ ದೇವಾ ನ ಮಹರ್ಷಯ ಃ

ಒಬ್ಬ ನಾರಾಯಣನೆ ಲಯದಲ್ಲಿಪ್ಪನು ಗಡ
ಅಬ್ಜಸಂಭವನಾಗಲ್ಲಿರನು
ಅಬ್ಬರದ ರುದ್ರ ಮತ್ತಿರ್ದ ದೇವರ್ಕಳು
ಸರ್ಬಋಷಿಗಳಲ್ಲಿಲ್ಲ ಗಡ ೨

ಏಕೋ ನಾರಾಯಣ ಆಸೀದೆಂಬ ಶ್ರುತಿ
ಶ್ರೀಕೃಷ್ಣನೊಬ್ಬನೆ ಪ್ರಳಯದಲಿ
ಆ ಕಾಲದಿ ನ ಬ್ರಹ್ಮಾ ನಚ ಶಂಕರ ಎಂದು
ಬೇಕಾದರ್ಥವ ನಿರ್ಣೈಸಿತಲ್ಲ ೩

**ಶ್ಲೋಕ :** ಸಂಹೃತ್ಯ ನಿಖಿಲಂ ಶೇತೇ ನಿದ್ರಯಾ ಪ್ರಳಯಾಂಬುನಿ
ಕದಾಪಿ ನ ವಿಯುಜ್ಯೋತ ತ್ವಯಾ ವಿಶ್ವಪತಿಃ ಸದಾ

ಪ್ರಳಯಕಾಲದಲಿ ಎಲ್ಲ ಜಗವ ಲಯವ ಮಾಡಿ
ಲಲನೆ ಲಕ್ಷ್ಮಿಕೂಡೆ ವಟದ
ಎಲೆಯಲ್ಲಿ ಮಲಗಿ ಸುಖದಲ್ಲಿಪ್ಪ ಎಂದು
ಅಳಿವಿಲ್ಲ ಪ್ರಕೃತಿ ಪುರುಷರ್ಗೆ ೪

ಸಮನಾ ಎಂಬ ಸೂತ್ರ ಪ್ರಕೃತಿಶಬ್ದ ವಾಚ್ಯ
ರಮೆಗೂ ತತ್ಪುರುಷ ಶ್ರೀಹರಿಗೂ
ಸಮದೇಶ ಕಾಲಗಳಲ್ಲಿರವ ಪೇಳಿತಾಗಿ
ಭ್ರಮೆ ಸಲ್ಲ ನಾವೆಂದರ್ಥದಲ್ಲಿ ೫

ಬೊಮ್ಮನ ಪ್ರಳಯದಲಿ ಸುಮ್ಮನೆಯಾಗಿಪ್ಪ
ನಮ್ಮ ದೇವಗೆ ಮೃತ್ಯುವಿಲ್ಲ
ಜನ್ಮವಿವಗೆ ಇಲ್ಲ ಪ್ರಾಗಭಾವವಿಲ್ಲ

ಅಮ್ಮಮ್ಮ ಮೃಣ್ಮಯವಹುದೆ ೬

ಜನನ ಮರಣಗಳ ತೊರೆದಾಲಯದಿ ಹರಿ
ವನಿತೆಯರೊಡನಾಡುವಾಗ
ಮನೆಮನೆದೈವಂಗಳೆಲ್ಲಿ ಪೋದವೊ ಸರ್ವಾ-
ಗ್ರಣಿ ಬೊಮ್ಮಹೆಮ್ಮಗನು ೭

ಅನೇಕ ದನುಜರಟ್ಟುಳಿ ಬಂದಬಂದಾಗ
ಅನುಸರಿಸಿ ಇವನ ಎಂದೆಂದೂ
ಅನಾಯಾಸದಲ್ಲಿ ಬಾಳ್ವ ದೇವರ ಹರಿ
ಗೆಣೆಎಂಬರವಿವೇಕಿಗಳು ೮

ಪಾರಂತಕಾಲೇ ಸರ್ವೇ ಮುಚ್ಚಂತಿ ಎಂಬ
ನಿರವಕಾಶ ಶ್ರುತಿಯಿರಲು
ದುರಾಸೆಯ ಬಿಡು ವಾದಿ ಇನ್ನೊಂದು ಲಯದಿ
ವಿರಿಂಚಿ ಪ್ರಳಯವೆ ಮಹಾಪ್ರಳಯ ೯

ಈ ಲಯಕ್ಕಳುಕದ ಕಾರಣ ಹರಿಗುಣ-
ಗಳಿಗೆ ಲಯ ಸಲ್ಲದಾಗಿ
ತಾಳದು ನಿರ್ಗುಣ ನಿರಾಕಾರದ ಮಾತು
ಆಲೋಚನೆಯ ಬಲ್ಲವರಿಗೆ ೧೦

ಏಕನೆನಿಪ ಬ್ರಹ್ಮ[ಗೈ]ಕ್ಯವೆಂತಪ್ಪುದು
ಏಕವೇ ಐಕ್ಯವಲ್ಲವಲ್ಲಾ
ಏಕಸ್ವಭಾವ ಐಕ್ಯವೆಂದು ಪೇಳ್ವರೆ
ವ್ಯಾಕರಣದವರ ನೀ ಕೇಳೊ ೧೧

ಧರ್ಮವೆನಿಪ ನಿಮ್ಮ ಬ್ರಹ್ಮ ಜೀವರೈಕ್ಯ
ಚಿನ್ಮಾತ್ರದಲಿ ಅದ್ವಿತೀಯ
ಅಮ್ಮಮ್ಮ ಅದ್ವಿತೀಯ ಶ್ರುತಿಯು ನಿನಗೆ
ಸಮ್ಮತೈಕ್ಯವ ಖಂಡಿಸಿತಲ್ಲ ೧೨

ತನ್ನ ಬಾಯಿಗೆ ಮುಟ್ಟುತಿಹ ಮೂಷಕನ ಬಿಟ್ಟು
ನಿನ್ನ ಶ್ರುತಿಯೆಂಬ ಭುಜಗನು
ಅನ್ಯತ್ರ ಪೋಗದೆ ಒಂದರಿಂದುದರ ಸಂ
ಪೂರ್ಣವಾಗಲು ಮತ್ತೆರಗದು ೧೩

ಲೋಕವಿಲ್ಲೆಂಬಾಗ ಲೋಕಾಂತರ್ಗತವಾದೀ
ವಾಕು ತಾನೇ ಪೋಗದಿಹುದೇ

ತಾ ಕೆಡುವರ್ಥವ ತಾನಕಟ ಪೇಳ್ವರೆ
ಕಾಕುಮಾಡದಿರು ಶ್ರುತಿಗಳ ೧೪

ಶ್ರುತವಾದರ್ಥವಾ ಶ್ರುತಿಯನ್ನೆ ಕೆಡಿಸುವ
ಪಾತಕವಂ ಗೈಸುವುದೇ
ಯಾತರಿಂದೇನಾಯ್ತು ತದ್ವಿಘಾತಕ್ಕೆ
ಹೇತುವಲ್ಲೆಂಬರು ಬುಧರು ೧೫

ಚಿನ್ಮಾತ್ರಾಶ್ರಯವೆಂಬ ನಿಮ್ಮ ಅಜ್ಞಾನವು
ನಮ್ಮ ನಾರಾಯಣಗಿಲ್ಲ
ರಮ್ಮೆಯರಸ ತನ್ನ ನಾಭಿಪದ್ಮದಿಂದ
ನಿರ್ಮಿಸಿದೀ ಜಗಪುಸಿಯೇ ೧೬

ಅನಾದಿಮಾಯಾ ಸುಪ್ತನು ಗಡ ಜೀವನು
ಅನಿದ್ರಗಡ ಪರಬೊಮ್ಮ
ಅನುಭವಕೆ ತಂದುಕೊ ಈ ಶ್ರುತಿಯರ್ಥವ
ಮನಕೆ ಬಂದಂತಾಡಬೇಡ ೧೭

ಮೃತಿಯಿಲ್ಲದವ ನಿತ್ಯಾಮೃತನೆಂದು ಪ್ರಸಿದ್ಧ
ಕೃತಿಯಿಲ್ಲದವ ಪುನರ್ಭವಕೆ
ಅತಿದೂರನಲ್ಲವೆ ಅದರಿಂದ ನಮ್ಮ ಶ್ರೀ-
ಪತಿ ನಿತ್ಯಮುಕ್ತ ಬಲ್ಲವಗೆ ೧೮

ಅವ ನಿತ್ಯಮುಕ್ತ ಜೀವರು ಮಧ್ಯಮುಕ್ತರೆಂ-
ಬ ವಿರುದ್ಧಧರ್ಮ ಮುಕ್ತಿಯೊಳು
ಸುವಿವೇಕಿಗಳಿಗೆ ಸಮ್ಮತವಾದಕಾರಣ
ಇವನೈಕ್ಯವಲ್ಲಿಯು ಸಲ್ಲ ೧೯

ಎಂದೆಂದು ಕರ್ಣಶೂನ್ಯ ಪನ್ನಗನಿಗು ಕಳುವಿ
ನಿಂದ ಕರ್ಣ ಪೋದವಗು
ಮಂದಮಾನವ ಮಹದಂತರವಲ್ಲವೆ ಈ
ಯಂದ
ಮಧ್ಯಮಮುಕುತರಿಗು ೨೦

ಸಾಯುಜ್ಯವೆಂಬ ಶಬ್ದವು ಶಾಬ್ದಿಕರಿಗೆ[ಯು
ಜಿರ್ಯೋಗೇ]ಎಂಬ ಧಾತುವಿನಿಂ
ದಾಯಿತೆಂಬುದು ಸಿದ್ಧವದರಿಂದ
ಬಾಯಿಗೆ ಬೀಗವಾಯಿತಲ್ಲ ಖಳರ ೨೧

ಹರಿಯ ಸರ್ವಾಂಗದಿ ತುಂಬಿರ್ದ ಜೀವರ
ಇರವೆ ಸಾಯುಜ್ಯವೆನಿಪುದು
ಮರುಳಾಗಬೇಡ ಮಾನವ ಸರ್ವೇಶನೆತ್ತ
ಹರಿಯನುವ್ರತಮುಕ್ತ'ರೆತ್ತ ೨೨

**ಶ್ಲೋಕ :** ಸ್ಷ್ಯೇಹಿ ಚೇತನಗಣಾನ್ ಸುಖದುಃಖಮಧ್ಯ
ಸಂಪ್ರಾಪ್ತಯೇ ತನುಭೃತಾಂ ವಿಹೃತಿಂ ಮಮೇಚ್ಛನ್
ಸೋಽಯಂ ವಿಹಾರ ಇಹಮೇ ತನುಭೃತ್ಸ್ವಭಾವ
ಸಂಭೂತಯೇ ಭವತಿ ಭೂತಕೃದೇವ ಭೂತ್ಯಾಃ

ಮತ್ತೊಂದು ತಂಡದ ಜೀವರಾಶಿಗಳಿಗೆ
ಮುಕ್ತಿ ಮೊದಲಾದ ಗತಿಯ
ಚಿತ್ತಜನಯ್ಯ [ಇತ್ತಪೆ]ನೆಂದು ಪುನರಪಿ
ಚಿತ್ರ ಜಗತ್ತು ನಿರ್ಮಿಸಿದ ೨೩

ಇದು ಲೀಲೆ ತನಗೆ ಲಕ್ಷ್ಮಿಗೆ ಮಹದೈಶ್ವರ್ಯದಾ-
ಸ್ಪದವ ಕೊಡುವುದು ಜೀವರಿಗೆ
ಸದಾ ಸಮ್ಮಿಶ್ರ ಫಲವಾಹುದು ಅದರಿಂದ
ಅದುಭುತ ಜಗವ ನಿರ್ಮಿಸಿದ ೨೪

ಲೋಹಿತ ಶುಕ್ಲ ಕೃಷ್ಣಗಳೆನಿಪ ಪ್ರಕೃತಿಯ
ನೇಹದ ನಿಜಸತಿಗಿತ್ತು
ಶ್ರೀ ಹರಿಯದರಿಂದ ವರ್ಣತ್ರಯದ ರೇಣು
ವ್ಯೂಹವ ಬೇರೆ ಬೇರಿಟ್ಟ ೨೫

ಸತ್ವವೆಂಬ ಗುಣ ಶುಕ್ಲಾಣುಗಳ ರಾಶಿ
ರಕ್ತಾಣುವೆ ರಜೋಗುಣವು
ಮತ್ತೆ ನೀಲಾಣುಗಳ ಮೊತ್ತವೆ ತಮೋಗುಣ
ಪ್ರತ್ಯೇಕ ಶಕ್ತಿಗಳಿವಕೆ ೨೬

ಈ ಪರಮಾಣುಗಳ ರೂಪವೆಂಬೋ ಗುಣದ
ವ್ಯಾಪಾರ ಬಹಳವಾಗಿರಲು
ಆ ಪರಮಾಣುಗಳ ಗುಣವೆಂದು ಕರೆವರೈ
ತಾಪಸರಿದಕೆ ಮೆಚ್ಚುವರು ೨೭

ಯಾವದ್ರವ್ಯ ಭಾವಿಗುಣಕೆ ಗುಣಿಯೊಳೇಕೀ-
ಭಾವವೆಂದೆಂಬ ರಹಸ್ಯ
ಕೋವಿದರಿಗೆ ತೋರುವುದು ಈ ಗುಣಗಳನೆ

ಭಾವಜ್ಞ ಗುಣವೆಂದೆಂಬುವರು ೨೮

ಇಪ್ಪತ್ತುನಾಲ್ಕು ಈ ತತ್ವಸೂಕ್ಷ್ಮಂಗಳಿಗೆ
ತಪ್ಪದೆ ಸ್ಥೌಲ್ಯ ಬಪ್ಪಂತೆ
ಒಪ್ಪುವೀ ಗುಣತ್ರಯದಣುಗಳ ಕೂಡಿಸಿ
ಸರ್ಪಶಾಯಿ ಸೃಷ್ಟಿಸುವ ೨೯

ಬೆರೆಸಿದ ಇಪ್ಪತ್ತು ನಾಲ್ಕು ತತ್ತ್ವಂಗಳ
ಪರಮ ಸೂಕ್ಷ್ಮಾಣು ರಾಶಿಗಳ
ತೆರತೆರದಿ ತೆಗೆದು ತತ್ತ್ವಂಗಳ ಸಾಲ
ವಿರಚಿಸುವಂದ ಸಾಲದೆ ೩೦

ಎಷ್ಟು ಮಹತ್ತತ್ವ ಸೃಷ್ಟಿಗಾಗಬೇಕೊ
ಅಷ್ಟು ತ್ರಿಗುಣದ ಅಂಶಗಳ
ಇಟ್ಟು ಮತ್ತದರಿಂದ ಅಹಂಕಾರತತ್ವವ
ಪುಟ್ಟಿಸುವುದಕ್ಕೊಂದಿಷ್ಟಿಡುವ ೩೧

ಕಾರಣ ತತ್ವರಾಶಿಗಳಿಂದ ತೆಗೆತೆಗೆದು
ಬೇರಿದ್ದ ತ್ರಿಗುಣದಂಶಗಳ
ಸೇರಿಸಿ ಉತ್ತರೋತ್ತರತತ್ತ್ವಂಗಳ
ಶ್ರೀಧರ ಮಾಡುವ ಕ್ರಮದಿಂದ ೩೨

ಮಹತ್ತೆಂಬ ತತ್ವ ಮಹಿಮೆಯನೀವುದು
ಅಹಂ ತತ್ವದಿಂದಹಂಕಾರ
ಬಾಹೋದು ಬುದ್ಧಿ ನಿಶ್ಚೈಸಿಕೊಡುವುದು
ನಾನಾಹಂಬಲಿಕೆಯ ಮನವು ೩೩

ಐದು ಕರ್ಮೇಂದ್ರಿಯಗಳೈದು ಜ್ಞಾನೇಂದ್ರಿಯಗ
ಳೈದು ತನ್ಮಾತ್ರ ತತ್ವಗಳು
ಐದು ಭೂತಂಗಳೆಂದಿಪ್ಪತ್ತುನಾಲಕು
ಆದಿಕಾಲದ ತತ್ವಂಗಳು ೩೪

ಹತ್ತು ಕರಣಂಗಳು ನಿತ್ಯದಿ ವಿಷಯಗಳ
ಅರ್ತಿಯ ತೋರಿ ಈ ಮನವ
ಅತ್ತಲೆಳೆಯಲು ಉಂಡುಂಡಹಂಕರಿಸೆ
ಮರ್ತ್ಯರಿಗೆ ಬಹದೆ ಮಹತ್ವ ೩೫

ನಿತ್ಯ ನೈಮಿತ್ತಿಕ ಸತ್ಕರ್ಮಂಗಳ ಮರೆ–
ದುತ್ತಮರೊಳು ಮತ್ಸರಿಸುವ

ವಿತ್ತ ಸಂಪತ್ತಿಗುನ್ಮತ್ತನಾಗಿ ಭವದಲಿ
ಸುತ್ತಿ ಸುತ್ತಿ ಅರ್ತಿಯನುಂಬ ೩೬

ಅಂಗನೆಯರಾಸೆಗೆ ಚರಣಂಗಳು ನಡೆಸುವುವು
ಕಂಗಳವರಂಗವ ತೋರುವುವು
ಬಂಗಾರಕೊಡಿಸ್ಯವರ ಎಂಜಲನುಣಿಸುವುವು ಕ–
ರ್ಣಂಗಳು ನುಡಿಗೆ ಮರುಳಹವು ೩೭

ದುಷ್ಟಾನ್ನ ಉಂಡುಂಡು ಪೊಟ್ಟೆಪೊರೆಯಿಸುವು[ವು]
ಭ್ರಷ್ಟರೊಡನಾಡಿಸುವುವು
ಕೊಟ್ಟರೆ ಕೊಂಡಾಡಿ ಕೊಡದಿರೆ ಬೈಸುವುವು
ಕಷ್ಟಗತಿಗೆ ಕಡೆಗೆಳಸುವುವು ೩೮

ಈ ತತ್ತ್ವಂಗಳಿಗೀಶರಾದ ದೇವತೆಗಳ
ವ್ರಾತಗಳನಿವು ಕೆಡಿಸವು
ಭೂತಳದೊಳಗರಸಿನಮನೆಸಂಕೋಲೆ
ಆತನ ಕಾಲ ಕಟ್ಟುವುದೆ ೩೯

ಜೀವರಾಶಿಗಳಿಗೀ ತತ್ವಗಳಿಂದಲೆ
ನೋವನೀವುತ ಭವದೊಳಗೆ
ತಾವಿದಕ್ಕೊಳಗಾಗದಿಹರು ಶ್ರೀಹರಿಯ ಕೃ–
ಪಾವಲೋಕನ ಬಲದಿಂದ ೪೦

ಇಂತು ಭ್ರಾಂತಿಯನೀವ ಈ ತತ್ವಂಗಳೆ ಮ–
ಹಂತರ ಸಂಗ ದೊರಕಲು
ಸಂತತ ಶ್ರವಣಾದಿ ಸನ್ಮಾರ್ಗಕ್ಕೆರಗಿಸಿ
ಕಂತುಪಿತನ ತೋರಿಸುವುವು ೪೧

ಹರಿಯತ್ತ ನಡೆಸುವುವು ಹರಿನಾಮ ನುಡಿಸುವುವು
ಹರಿಪೂಜೆಯನೆ ಮಾಡಿಸುವುವು
ಹರಿಮೂರ್ತಿ ನೋಡಿಸಿ ಹರಿಕೀರ್ತಿ ಪಾಡಿಸಿ
ನರರಹಂಕೃತಿ ಕೆಡಿಸುವುವು ೪೨

ಉಕ್ಕು ತಗ್ಗಿಸುವುವು ಸೊಕ್ಕು ನಿವಾರಿಸಿ
ಸತ್ಕರ್ಮಕಿಕ್ಕಿ ಸಲಹುವುವು
ದುಃಖವೀವ ಪಂಚಭೂತಾತ್ಮಕ ದೇಹ
ದಕ್ಕರ ಬಿಡಿಸಿ ರಕ್ಷಿಪುವು ೪೩

ಈಸು ಪುಣ್ಯವ ಮಾಡಿ ದಿನದಿನ ಧೇನಿಸೆ

ಶ್ರೀಶ ಸಂತೋಷಿಸಿ ತನ್ನ
ಭಾಸುರಮೂರ್ತಿಯ ಕಣ್ಗೆ ಕಾಣಿಸಿಕೊಡುವ
ದೋಷಗಳ ದೂರಕ್ಕೋಡಿಸುವ ೪೪

ಅಂತವಿಲ್ಲದ ಸ್ವರೂಪಸುಖದನುಭವಕೆ
ಅಂತರಾಯವ ಮಾಳ್ಪವೆಂದು
ಚಿಂತಿಸಿ ತುದಿಯೊಳಿವ ಸಂತರಿಸುವಂತೆ ಶ್ರೀ
ಕಾಂತನ್ನ ಸಂತರ್ಬೇಡುವರು ೪೫

ಕಣ್ಣಂಶ ಕಾಣೋದು ಕಿವಿಯಂಶ ಕೇಳೋದು
ರಸನಂಶಾಸ್ವಾದಿಸುವುದು
ಭಿನ್ನತತ್ವಗಳಿಗೆ ಭಿನ್ನಭಿನ್ನಕಾರ್ಯ
ವನ್ನೆ ಮಾಡುವ ಶಕ್ತಿ ಕಾಣಿರೊ ೪೬

ಅನ್ಯೋನ್ಯ ಕಾರ್ಯವ ಮಾಡಲರಿಯವು ಚ
ರಣ ನಡೆದಂತೆ ಕೈ ನಡೆಯುವುದೆ
ಘ್ರಾಣ ಗಂಧವಾಘ್ರಾಣಿಸುವಂತೆ ತ್ವಗಂಶ
ಘ್ರಾಣಿಸಬಲ್ಲುದೆ ಕೇಳಿ ೪೭

ಇಂಬುಕೊಡುವುದಕ್ಕೆ ಅಂಬರವೆ ಬೇಕು ಬಾಯಿ
ತುಂಬ್ಯೂದುವರೆ ವಾಯು ಬೇಕು-
ಉಂಬಡುಗೆಗೆ ಕಿಚ್ಚುಬೇಕು ತೃಷೆಗಳೆವರೆ
ಅಂಬುವೆ ಬೇಕುಣಲನ್ನ ಬೇಕು &,ಟಿಛಿ;೪೮

ಅದರಿಂದ ಇಪ್ಪತ್ತುನಾಲ್ಕು ತತ್ವಂಗಳಿಗೆ
ಅಧಿಕ ನ್ಯೂನ ಸಂಖ್ಯಾ ಸಲ್ಲ
ಇದನು ವಿವೇಕಿಸಿ ಹರಿ ಕಂಡು ಅವರವರಿಂ
ಮೊದಲೆ ರಾಶಿಗಳ ಸೃಜಿಸುವ ೪೯

ಇಂತು ತತ್ವ ಸೂಕ್ಷ್ಮಾಂಶ ಪ್ರಕೃತಿಯೊಳ
ನಂತಗಳಾಗಿಪ್ಪುವು ಗಡ
ಅಂಥ ರಾಶಿಗಳ ನಾನಾಧಾನ್ಯದ ರಾಶಿ
ಯಂತೆ ಕೂಡಿ ಸೃಷ್ಟಿಸುವ ೫೦

ಇದರೊಳು ಮೊದಲು ಮಹತ್ತತ್ವಾಂಶದ ಸೃಷ್ಟಿ
ಅದರಿಂ ಮೇಲೆ ಕ್ರಮಕ್ರಮದಿ
ತುದಿಯ ಪೃಥ್ವಿತತ್ವಪರಿಯಂತ ಅವನವನೆ
ಒದಗಿಸಿ ಮಾಳ್ಪ ಹರಿಗೆಣೆಯುಂಟೆ ೫೧

ಮಹತ್ತತ್ವದಂಶಗಳೆ ಶುಕ್ಲವಾಗಿಪ್ಪವು ಗಡ
ಅಹಂತತ್ವ ಮೂರು ಬಣ್ಣವಕ್ಕು
ಅಹುದದರ ಶುಕ್ಲಾಣುಗಳಿಂದ ಬುದ್ಧಿಯು ಮನ
ಲೋಹಿತಾಂಶಗಳಿಂ ದಶೇಂದ್ರಿಯಗಳು ೫೨

ಕಪ್ಪಿನಂಶಗಳಿಂದ ಪಂಚಭೂತಗಳು
ಕಲ್ಪನೆಯಲ್ಲ ಪಿರಿಯರು
ಒಪ್ಪಿ ಪೇಳುವರಿಂತು ಬುದ್ಧಿಯೊಡನೆ ಮನ
ಕೊಪ್ಪ ಷೋಡಶ ಕಲೆಗಳ ೫೩

ತಾಮಸವೆಂಬ ಕಪ್ಪಿನಂಶದಿಂದ ಪಂಚ
ತನ್ಮಾತ್ರ ಸೃಷ್ಟಿ ಮೊದಲು ಗಡ
ಆಮೇಲೆ ವ್ಯೋಮಾದಿ ಪಂಚಭೂತಗಳ
ಜನ್ಮ ಎಂಬೋದು ಸಿದ್ಧಾಂತ ೫೪

ತುದಿಯೊಳು ಸೃಷ್ಟಿಸಿದಿಪ್ಪತ್ತುಮೂರನೆ
ಉದಕವೆಂಬ ತತ್ತ್ವದೊಳಗೆ
ಕದಡದಂತೆ ಭೂರಜವಮಾಡಿ ಕೂಡಲಿಂ-
ತುದಿಸಿದವಖಿಳ ತತ್ವಗಳು ೫೫

ಇಂಥ ಮಹದಾದಿ ತತ್ವಗಳ ಸೃಷ್ಟಿಸಿ
ತತ್ತಸ್ಥಾನದಲಿಟ್ಟು ಪೊರೆವ
ಉತ್ತಮಪುರುಷ ಅವರ ತೆತ್ತಿಗನಾಗಿ
ಸುತ್ತ ಸುರರ ನಿರ್ಮಿಸಿದನು ೫೬

ಶುದ್ಧ ಸತ್ವಗುಣದಿಂದಲೆ ತತ್ವಂಗ-
ಳಾಳ್ದ ದೇವರ ದೇಹಂಗಳನು
ಮಾಳ್ದನವರವರ ಯೋಗ್ಯತೆಗೆ ತಕ್ಕಷ್ಟು
ಕೊಡ್ಡ ಮಿಕ್ಕ ಸುಗುಣಂಗಳನು ೫೭

ಮತ್ತೆ ತನ್ನರಸಿಯೊಡನೆ ನೀರೊಳ್ಮಲಗಿದ್ದು
ತತ್ವದೊಂದೊಂದಂಶಗಳನು
ಚಿತ್ರರೇತವ ಮಾಡಿ ಚಿನ್ನದಜಾಂಡವ
ಸತ್ಯಸಂಕಲ್ಪ ನಿರ್ಮಿಸಿದ ೫೮

ನೀರೊಳಗಿದ್ದ ಭೂರೇಣುಗಳೆಲ್ಲವ
ಸೇರಿಸಿ ತನ್ನುದರದೊಳು
ಆರನೆಯ ಗರ್ಭದಿಂ ಯೋನಿದ್ವಾರದಿ ತೆಗೆದು

ನೀರಜಜಾಂಡವ ನಿರ್ಮಿಸಿದ ೫೯

ನೂರುಕೋಟಿಯೋಜನ ಪ್ರಮಾಣ ಸುತ್ತಲು
ಸೂರಿಯನಂತೆ ಶೋಭಿಸುವ
ಆ ರಮ್ಯ ಬೊಮ್ಮಾಂಡ ಪೊಕ್ಕು ಪುನರಪಿ
ನೀರೊಳು ಕೃಷ್ಣ ಮಲಗಿದ್ದ ೬೦

ಬೊಮ್ಮಾಂಡದೊಳಗೆ ಇಪ್ಪತ್ತುನಾಲ್ಕು ತತ್ತ್ವ
ಸುಮ್ಮನವಾಗಿ ಬೆರೆಸಿಹವು
ಆಮೇಲೆ ಭೂಮ್ಯಾದಿ ಹತ್ತಾವರಣಂಗಳು
ಕ್ರಮ್ಮದಿ ಸುತ್ತಮುತ್ತಿಹವು ೬೧

ಪೃಥ್ವಿರೂಪವಾದ ಅಂಡವೆಂಬಾವರಣ
ಸುತ್ತಲು ಸುತ್ತಿಕೊಂಡಿಹುದು
ಮತ್ತೆ ಅಪ್ಪಾದಿ ಸತ್ವಂತವಾದಾವರಣ
ಹತ್ತು ಹತ್ತಾಗಿ ಬೆಳೆದಿಹವು ೬೨

ಬೆಳೆದ ಠಾವಿನಲ್ಲಿ ಮೇಲ್‌ಮೇಲಾದಾವರಣ
ಉಳಿದ ತತ್ತ್ವವನೊಳಗೆಳೆದು
ಒಳಗೆ ಹೊರಗೆ ಎಲ್ಲ ಬೆರೆಸಿಕೊಂಡಿಪ್ಪುದಿಂ-
ತಿಲ್ಲದಿರೆ ಮಹಿಮೆಯೆಂತಿಪ್ಪುದಿದಕೆ ೬೩

ಉತ್ತರೋತ್ತರತತ್ವಕ್ಕಧಿಕ ವ್ಯಾಪ್ತಿ ಬೇಕು
ಸುತ್ತು ಸುತ್ತಿಹುದೈಸೆ ಎನಲು
ತತ್ವಮಯವಾದ ದೇಹಂಗಳೆಂತಿಪ್ಪುವು ಜೀವ-
ರ ತ್ರಿಗುಣಂಗಳೆಂತು ಕಟ್ಟುವುವು ೬೪

ಒಳಹೊರಗೆ ವ್ಯಾಪ್ತವಾಗಿಹವು ಮೇಲಣತತ್ವ
ಕೆಳಕೆಳಗೆ ಕೀಳು ತತ್ತ್ವಗಳಿಹವು
ಜಲಜನಾಭನಿಂತು ಹತ್ತಾವರಣಂಗಳ
ಒಳಗೆ ಈ ಜಗವ ನಿರ್ಮಿಸಿದ ೬೫

ನೂರುಕೋಟಿಯೋಜನ ಮೊದಲಂಡಾವರಣಕ್ಕೆ
ನೀರಮೇಲೆ ಈರೇಳಾಗಿ
ತೋರುವ ಲೋಕಗಳಿಂದೈವತ್ತು ಕೋಟಿ ಮೇ-
ಲಾರು ಮೂರು ದಶೋತ್ತರವು ೬೬

ಇಂತೆಲ್ಲವ ಕೂಡಿ ವ್ಯಾಪ್ತವಾದ ಲಕುಮಿ
ಕಾಂತನ ದಿವ್ಯ ಶ್ರೀಮೂರ್ತಿ

ಆಂತುಕೊಂಡಿಪ್ಪುದು ರೋಮಕೂಪವ ತುಂಬು-
ವಂತೆ ಆ ಹರಿಗಿನ್ನಾರೆದುರು   ೬೭

ಅಂಡೋದಕದಿ ಸಾಸಿರವರ್ಷ ಪರಿಯಂತ
ಪುಂಡರೀಕಾಕ್ಷ ಪವಡಿಸಿದ
ಚಂಡಾಂಶು ಸಹಸ್ರ ಸನ್ನಿಭನಾಭಿಯಿಂದು-
ದ್ದಂಡ ಕಮಲವ ನಿರ್ಮಿಸಿದ   ೬೮

ಇಪ್ಪತ್ತೈದುಕೋಟಿ ಯೋಜನ ಬೆಳಗುವ
ತತ್ಪದ್ಮದಲ್ಲಿ ಪದ್ಮಜನ
ಕಲ್ಪಿಸಿ ಆ ಪದ್ಮದಳದಲ್ಲಿ ಈರೇಳಾ-
ಗಿಪ್ಪ ಲೋಕಗಳ ಮಾಡಿದನು   ೬೯

ಮೊದಲಾ ಬ್ರಹ್ಮನಿಗೆ ಮುಕ್ತಿಪದವನಿತ್ತು-
ಳಿದದ ಮುಖ್ಯಪ್ರಾಣನಿಗೆ
ಪದುಮಸಂಭವನೆಂಬ ಪಟ್ಟವನಿತ್ತು ಈ
ಹದಿನಾಲ್ಕು ಲೋಕವನಾಳೆಂದ ೭೦

**ಶ್ಲೋಕ :** ಮುಖ್ಯಪ್ರಾಣಾಯ ನಮೋ ಮಂತ್ರ'ತ್ರಯ ಜಪಃ ಸದಾ
ಅನುಗ್ರಹಾಯ ಮೇ ವಿಷ್ಣೋಃ ಪ್ರೀತಯೇ ಕ್ರಿಯತೇ ಹಿ ಸಃ
ಏಕವಿಂಶತ್ಸಹಸ್ರಾತ್ಮಾ ಸಷಟ್ಶತಮಹರ್ನಿಶಂ
ಶ್ವಾಸರೂಪ ಜಪೋ ನಿತ್ಯಂ ಉಭಯೋರ್ವಿದ್ವದಜ್ಞಯೋಃ

ಆರುನೂರು ಕೂಡಿ ಇಪ್ಪತ್ತೊಂದುಸಾವಿರ
ಮಂತ್ರೈಕ ಶ್ವಾಸಜಪವ
ಮಾರುತ ಈರೇಳು ಲೋಕದ ಜೀವರೊ-
ಳೋರಂತೆ ಮಾಡಿ ಮೆಚ್ಚಿಸುವ ೭೧

ಇಂಥ ಭಕ್ತನಿಗೆ ಬ್ರಹ್ಮಪಟ್ಟವನು ಶ್ರೀ-
ಕಾಂತ ಕಟ್ಟುವುದೊಂದಚ್ಚರಿಯೆ
ಎಂತೆಂತು ಸೇವಿಪರಂತಂತವರ ದಯ-
ವಂತನನಂತ ರಕ್ಷಿಸನೆ ೭೨

ಆರುತಿಂಗಳು ತಪಮಾಡಿದ ಧ್ರುವನಿಗೆ
ಸೇರಿಸಿದನು ಧ್ರುವಪದವ
ನೂರು ಬ್ರಹ್ಮನವರುಷಪರಿಯಂತ ಈ ವಿಧದಿ
ಆರಾಧಿಸಿದಂಥ ಭಕುತನಿಗೆ   ೭೩

ಪೂರೈಸಿಕೊಡುವುದಕೆ ಕಡೆಯಿಲ್ಲದ ಋಣ ಸಾ-

ಸಿರಕೊಂದು ಕೊಟ್ಟು ತಿದ್ದುವಂತೆ
ಮಾರುತಗೆ ಬ್ರಹ್ಮಪದವಿತ್ತು ಮತ್ತವಗೆ ತ-
ನ್ನಾರೋಗಣೆಯಿಂದರ್ಧ ಯೀವ೭೪

ಲೆಕ್ಕವಿಲ್ಲದ ನಾನಾಜೀವರು ಮಾಡುವ
ಸತ್ಕರ್ಮಂಗಳ ಫಲವಾದ
ಸೌಖ್ಯವ ಬೊಮ್ಮಪಟ್ಟವನಾಳ್ವ ದೇವನ
ಲಕ್ಷ್ಮೀಶ ಕೂಡಿಕೊಂಡುಂಬ ೭೫

ಅದರಿಂದ ಸಹಭೋಗಪದವೆಂಬ ಇಂಥಾ ಸಂ-
ಪದವೀವ ಮುಖ್ಯಪ್ರಾಣನಿಗೆ
ಮದನನಯ್ಯನಿಂತು ಮಾಡಿದ ಸೇವೆಗೆ
ಸದೃಶ ಫಲವಿಂತು ಕೊಡುವ ೭೬

ನಂಬಿದ ಸಾಲಿಗ ಬಂದು ಬಂದು ಬೇಡ
ಲುಂಬಾಗ ಕೂಡಿಕೊಂಡುಂಡು
ನಂಬಿಸುವಂತೆ ಬೊಮ್ಮನಿಗರ್ಧ ಉಣಿಸಿ ಹರ
ಉಂಬ ಸಂಭ್ರಮವನೇನೆಂಬೆ ೭೭

ಬೊಮ್ಮನ ನೂರುವರುಷ ಪರಿಯಂತ
ಸಮ್ಮೀರ ಮಾಡಿದ ಜಪಕೆ
ಸಮ್ಮಾನ ಫಲವೊಂದು ಬ್ರಹ್ಮಕಲ್ಪದಲುಣಿಸಿ
ರಮ್ಮೇಶ ತಾನೆಂದೆಂದುಂಬ ೭೮

ಅಂದು ಹನುಮನಿಗಿತ್ತ ಚೆಂದದ ವರವನು
ಇಂದು ಸಾರ್ಥಕ ಮಾಡಿದನು
ಇಂದಿರೆಯೊಡಗೂಡಿ ತನ್ನ ಪುರಂಗಳ
ಪೊಂದಿ ಆನಂದದಿಂದಿದ್ದ ೭೯

ಕರ್ತುಹಯವದನ ಬೊಮ್ಮಾಂಡದೊಳಗೆ ಸ-
ರ್ವತ್ರ ಜೀವರ ತುಂಬಿಸಿಹನು
ಮುಕ್ತವರ್ಗವ ತನ್ನ ಮೂರುಸ್ಥಾನದಲ್ಲಿಟ್ಟು
ವಿಸ್ತರಿಸಿದ ಶ್ರುತಿಪಥವ ೮೦

ಇಂದಿರೇಶನಿಂತು ಈ ಜಗವೆಲ್ಲವ
ಚೆಂದದಿಂದಲಿ ನಿರ್ಮಿಸಿದನು
ಎಂದು ಪೇಳುವಲ್ಲಿ ಮೂರನೆಯ ಸಂಧಿಯು
ಸಂದುಪೋಯಿತು ಕೇಳಿ ಬುಧರು ೮೧

ದೈತ್ಯರಿಂದ ಬಾಧೆ ಬಂದಬಂದಾಗ ಹರಿ
ಹತ್ತವತಾರಗಳ ಮಾಡಿ
ಭೃತ್ಯರ ಪೊರೆದ ತನ್ನರ್ಥಿಯ ಪೂಜೆಯ
ಹತ್ತಿರೇ ಇದ್ದು ಕೈಗೊಂಬ ೮೨

ಶ್ರೀಧರ ಹಯವದನರಾಯನ ದಯದಿಂದ
ವಾದಿರಾಜೇಂದ್ರ ವಿರಚಿಸಿದ
ಈ ದಿವ್ಯಕಾವ್ಯದಿ ಸೃಷ್ಟಿಯೊರೆವ ರಮ್ಯ
ವಾದ ತೃತೀಯ ಸಂಧಿ ಪೊಸಬಗೆ ೮೩

**ಸ್ಥಿತಿಸಂಧಿ**

ಇದು ಪುಣ್ಯಕಥೆ ಲೋಕಕ್ಕಿದೆ ಮುಕುತಿಯ ಪಥ
ಇದಕೇಳುವವನೆ ಕೃತಾರ್ಥ
ಇದು ಸರ್ವಸಾಧನ ವಿಧುಗಳಿಗೆ ಸಮ್ಮತ
ಮುದವನೀವುದು ಕೇಳ್ವ ಜನಕೆ ೧

**ಶ್ಲೋಕ :** ನಾರಾಯಣಾಯ ಪರಿಪೂರ್ಣಗುಣಾರ್ಣವಾಯ
ವಿಶೋದಯ ಸ್ಥಿತಿಲಯೋನ್ನಿಯತಿ ಪ್ರದಾಯ
ಜ್ಞಾನಪ್ರದಾಯ ವಿಬುಧಾಸುರಸೌಖ್ಯ ದುಃಖ
ಸತ್ಕಾರಣಾಯ ವಿತತಾಯ ನಮೋ ನಮಸ್ತೇ

ನೀಲನಿರ್ಮಲಗಾತ್ರ ನಿರುಪಮ ಚರಿತ್ರ
ಮೂಲಕಾರಣ ಮುಕ್ತರೊಡೆಯ
ಪಾಲಸಾಗರಶಯನ ಪಂಕಜನಾಭನೇ
ಪಾಲಿಸೋ ಪರಮಪಾವನನೇ ೨

ಹಾರ ಕೌಸ್ತುಭಧರ ಹಾವಿನಮೇಲೊರಗಿಪ್ಪ
ನಾರಾಯಣ ನಳಿನಾಕ್ಷ
ಚಾರುಕುಂಡಲ ಚೆಲ್ವ ಚಂದ್ರವದನ ನಮ್ಮ
ಮಾರಜನಕ ಮನ್ನಿಸುವ ೩

ಪೊನ್ನಪೆಂಡೆಯ ಕಾಂಚಿ ಪೊಳೆವ ಪೀತಾಂಬರ
ರನ್ನದ ಮಕುಟ ರಂಜಿಸಲು
ಅನ್ನರ್ಘ್ಯಾಭರಣದ ಅರ್ಥಿಹರಿ ನಮ್ಮ-
ಗುನ್ನತ ಸುಖವನುಣ್ಣಿಸುವ ೪

ಕಂಜ ಕಂಬುಚಕ್ರ ಕೌಮೋದಕೀಹಸ್ತ
ಮಂಜುಳಮೂರ್ತಿ ಮಾರಮಣ
ಕುಂಜರಭಯಹಾರಿ ಕುಜನಸಂಹಾರಿ ನಿ-
ರಂಜನ ರಕ್ಷಿಸು ಜಗವ ೫

ದುಷ್ಟದಾನವರನೆಬ್ಬಟ್ಟಿ ಸುಜನರ ಪ್ರ-
ತಿಷ್ಠೆಯ ಮಾಡಿ ರಕ್ಷಿಸಿದ
ಪಟ್ಟವ ಶಕ್ರಂಗೆ ಕಟ್ಟಿ ಬಲಿಯ ಕೆಳ
ಗಿಟ್ಟು ತನ್ನಿಷ್ಟರನು ಪೊರೆದ ೬

ಗ್ರಂಥಾದಿಯಲಿ ಮಾಳ್ಪ ಮಂಗಳಕೆ ಸಲೆ
ಸಂದ ವೇದವಾಕ್ಯವಿಲ್ಲದಿರೆ

ಚೆಂದದ ಶಿಷ್ಟಾಚಾರಬಲದಿಂದಲಿ
ಒಂದು ಶ್ರುತಿಯ ತಂದುಕೊಂಬುವುದು ೭

ನಿಂಬಾದಿತ್ಯ ವಿಷ್ಣುಸ್ವಾಮಿ ಮತದೇವ
ರೆಂಬ ನಿಮ್ಮವರೇ ಧರಿಸುವರು
ತುಂಬಿದ ತತ್ತ್ವವಾದಿಗಳು ರಾಮಾನುಜರು
ಸಂಭ್ರಮದಿ ತಪ್ತಚಕ್ರ ಧರಿಸೋರೈ ೮

ನಿಮ್ಮ ಮತದ ಸನ್ಯಾಸಿಗಳೆಲ್ಲರು
ನಿರ್ಮಲೋರ್ಧ್ವಪುಂಡ್ರ ಧರಿಸಿ
ತಮ್ಮ ಕರದಿಂದಲೆ ಚಕ್ರಮುದ್ರಿಕೆ ಸ-
ತ್ಕರ್ಮ ಮಾಡುವಲ್ಲಿ ಧರಿಸುವರು ೯

ಸ್ವತಪ್ತಚಕ್ರ ಸುಪವಿತ್ರ ಮುದ್ರಿಕೆ ಎಂದು
ಶ್ವೇತೋರ್ಧ್ವಪುಂಡ್ರಜ್ವಾಲೆಂದು
ನಿಮ್ಮ ಮತದ ಯತಿಗಳು ಮನ್ನಿಸಿದ ಶ್ರುತಿಯಿದು
ಯಾತಕಿನ್ನು ಬರಿದೆ ಕಲಹ ೧೦

ಇಷ್ಟು ಶಿಷ್ಟಾಚಾರಕೆಂದು ಮೂಲವೇದ
ಸ್ಪಷ್ಟಾರ್ಥ ಬಿಟ್ಟು ಕೆಡುವರೆ
ಪಟ್ಟದರುದ್ರ ಪದ್ಮದಲೆತ್ತಿದ ಶ್ರುತಿಯೊಡ'ಂ
ಬಟ್ಟು ಚಕ್ರವ ಧರಿಸಿರೊ ೧೧

**ಶ್ರುತಿ :** ಪವಿತ್ರಂ ತೇ ವಿತತಂ ಬ್ರಹ್ಮಣಸ್ಪತೇ ಪ್ರಭುರ್ಗಾತ್ರಾಣಿ
ಪರ್ಯೇಷಿ ವಿಶ್ವತಃ
ಅತಪ್ತ ತನೂರ್ನತ ದಾಮೋ ಅಶ್ನುತೇ ಶೃತಾಸ ಇದ್ವಹಂತಸ್ತತ್
ಸಮಾಶತ

ಉನ್ನಂತ ಬ್ರಹ್ಮನಿಗೆ ಪತಿಯೆನಿಪ ಪ್ರಭು ಜಗ-
ತ್ತಿನೊಳಗೆ ಹೊರಗೆ ಪೂರ್ಣ
ನಿನ್ನ ಕರಕಂಜದಲಿ ನೆಲಸಿದ್ದ ಸುದರ್ಶನ
ನಿನ್ನಂತೆ ಜಗದೊಳಗೆ ಪೂರ್ಣ ೧೨

ತನ್ನವನ ಪವಿಪಂಜರದಂತೆ ತ್ರಾಯತ್ಯೆಂಬ
ಮಾನ್ಯ ಪದಗಳ ಯೋಗಬಲದಿ
ಧನ್ಯರೀ ಹರಿಯ ಚಕ್ರವನ್ನೇ ಪವಿತ್ರ
ಪುನ್ನಾಮದಿ ಕರೆಯುತಿಹರು ೧೩

ಈ ಚಕ್ರದಿಂದ ಆವನು ಅತಪ್ತನೋ ಆ

ನೀಚನಿಗೆ ಪರಸುಖ ದೊರಕದು
ಯೋಚಿಸಲಾಮಘಟದಂತವ ಕೆಡುವ ತ್ರಿ–
ಲೋಚನನೀ ಶ್ರುತಿಗರ್ಥ ಪೇಳ್ದ ೧೪

ಶ್ವಪಾಕೇ ಎಂಬ ಧಾತುವಿನಿಂದಲೀ ಚಕ್ರ
ವ್ಯಾಪಕ ಭುಜಯುಗದಲ್ಲಿಹುದು
ಗೋಪೀಚಂದನದಿಂದ ದಿನದಿನವು ಪೂಸುವರ
ಕೃಪಾಳು ಹರಿಯವರಿಗೊಲಿವ ೧೫

ಉದರವ್ಯಥೆಯ ಬಿಡಿಸುವರೆ ಪೊಟ್ಟೆಯ ಮ್ಯಾಲೆ
ಮುದದಿಂದ ತಪ್ತಚಕ್ರವನು
ಬುಧರು ಧರಿಸುವರದನು ವಿಧಿಸಬೇಕೆಂದು ತನ್ನ
ಪದವಪೇಳಿತು ನಮ್ಮ ವೇದ ೧೬

ತಪ್ತಚಕ್ರವ ಧರಿಸಬೇಕೆಂದು ತೊಡಗಿ
ತತ್ಪ್ರಸ್ಥಾಪದಲಿ ಈ ಶ್ರುತಿಯ
ಅರ್ಥಪೂರ್ವಕವಾಗಿ ವಿಸ್ತರಿಸಿ ಪೇಳಿದ ಶಿವ
ಮತ್ತೊಂದರ್ಥವನಿದಕೆ ಮೆಚ್ಚ ೧೭

**ಶ್ಲೋಕ :** ಪವಿತ್ರಂ ಬ್ರಹ್ಮಣಸ್ಪತ್ಯಂ ಜಗದ್ವ್ಯಾಪ್ತಂ ಹರಿಂ ಸದಾ
ತೇನ ತಪ್ತತನೂರ್ಹ್ಯೇಷಾಂ ತೇನ ಯಾತಿ ಪರಾಂ ಗತಿಂ

ಸೋಮರಸವ ಶೋಭಿಸುವ ಜಾತಿಕವ್ಯಾಪ್ತ
ಕಾ ಮಹ ಚಕ್ರಸನ್ನಿಧಿಯ
ಧೀಮಂತರೆಲ್ಲ ಮಥಿಸಿ ಪವಿತ್ರ
ನಾಮ ಶ್ರುತಿಯಿಂದ ಮಥಿಸುವರು ೧೮

ಪಾವನವ ಮಾಡಿಸುವ ಶಕ್ತಿ ನಮ್ಮ ಶ್ರೀ–
ದೇವಿಯರಸನ ಚಕ್ರವೆಂಬುದನು
ಭಾವಜ್ಞರಿಗೆ ತೋರಿಸಲು ವಲಯ ಚಕ್ರವನೆ
ಪವಿತ್ರವೆಂಬ ನಾಮ ಶ್ರುತಿ ಕರೆಯಿತು ೧೯

ಶೋಧಿಸುವುದಕ್ಕೆ ಸಹಸ್ರ ಛಿದ್ರವುಳ್ಳ
ಮಾಧವನ ಪಾವನದ ಚಕ್ರ ಬೇಕೆಂದು
ಈ ದಿವ್ಯಚಕ್ರಮಂತ್ರವ ನ್ಯಾಯಕೋ
ವಿದರಾದ' ಮುನಿಗಳು ಮನ್ನಿಸುವರೊ ೨೦

ಗಂಗೆಯುದಕದಿಂದ ತೊಳೆದ ವಸ್ತುವನ್ನು ಆ
ಗಂಗಾಶಬ್ದದಿಂದ ಕರೆವರೆ ಮರುಳ

ತುಂಗಚಕ್ರ ಮಂತ್ರದಿಂದ ಮಂತ್ರಿಸೆ
ಮಂಗಳದ್ರವ್ಯ ಮಂತ್ರಾರ್ಥವಾಗುವುದೆ ೨೧

ಲೌಕಿಕಾನ್ನವ ಶುದ್ಧಿ ಮಾಡುವುದಕೆ ವಿ-
ವೇಕಿಗಳು ವ್ಯಾಹೃತಿಯಿಂದ ಪ್ರೋಕ್ಷಿಸಿ
ಬೇಕಾದ ಗಾಯತ್ರಿಯಿಂದ ಮಂತ್ರಿಸಲಾ
ಲೌಕಿಕಾನ್ನವು ಯತ್ಯರ್ಥವಪ್ಪುವುದು ೨೨

ಅದರಿಂದ ತ್ರಿಜಗದ್ಗುರುವಾದ ಶಿವನ ಆಜ್ಞದ
ವಿಧಿಯ ಮಾಡಿದ ಮುನಿಗೆ ಗುರುವಾದ
ಮದನವೈರಿಯ ಮತವು ಸೂತ್ರಕಾರರ ಮತವು
ಇದು ನಿರ್ಧರಿಸಲು ಒಂದೆ ಮತವಾಯಿತು ೨೩

ಇದನರಿಯದ ವಾದಿ ವಸ್ತ್ರದ ತುಂಡನ್ನು
ಪದದಿಂದ ಕರೆದನದಕೆ ಮೂಲಕಾಣಾ
ಪದುಮಪುರಾಣವ ಮುನಿಗಳೆಲ್ಲ ಬಲ್ಲರು
ಇದನರಿಯದ ಭಟ್ಟಭಾಸ್ಕರ ತಸ್ಕರ ೨೪

**ಶ್ಲೋಕ :** ಪವಿತ್ರಂ ಚರಣಂ ನೇಮಿಪವಿಶ್ಚಕ್ರ ಸುದರ್ಶನಂ
ಸಹಸ್ರಾರಂ ಪ್ರಾಕೃತಘ್ನಂ ಲೋಕಾಧಾರಂ ಮಹೌಜಸಂ

ಎಂಬ ಈ ಶ್ರುತ್ಯರ್ಥವನು ತುಂಬಿಸಿ ಪೇಳಿದ ಪದವೆ
ನಂಬಿಕೊಳ್ಳಿರೋ ನಾವೆಂದುದೆ ತತ್ತ್ವ

ಪವಿತ್ರನಾಮವೆಂಬೀ ಹತ್ತು ಪೆಸರು ಮಾ
ಧವ ಚಕ್ರಕೆ ಪರಿಯಾಯವಾಚಕವೆಂದು
ಶಿವನು ಪೇಳಿದ ತತ್ತ್ವವ ಬಿಡುವರೆ ಮಾನವ
ಅವನರಿಯದರ್ಥವ ಇನ್ನಾವ ಬಲ್ಲ ೨೫

ಹರನ ಭಕ್ತಳೆಂಬ ಗಿರಿಜಾದೇವಿಗೆ
ಪುರಹರನೊಲಿದು ಹೇಳಿದ ತತ್ತ್ವವ ಬಿಟ್ಟು
ನರನ ಮಾತ ನಂಬೀಶ್ವರನ ಉಕ್ತಿಯ ಜರೆವರೆ
ಮರುಳೆ ತಾಯ ಮಾರಿ ತೊತ್ತಕೊಂಬುವರೆ ೨೬

ಮುಕ್ಕಣ್ಣ ಪೇಳಿದರ್ಥವ ಬಿಟ್ಟು ಜಗದೊಳ-
ಗಿಕ್ಕಣ್ಣನಾದ ಪಾಮರನು
ಸೊಕ್ಕಿ ಮನಬಂದಂತೆ ನುಡಿಯೆ ಮೃಡ ಘುಡಿಘುಡಿಸಿ
ರಕ್ಕಸರ ಕೊಲ್ಲುವಂತೆ ಕೊಲುವ ೨೭

**ಶ್ರುತಿ :** ಯತ್ತೇ ಪವಿತ್ರಮರ್ಚಿಷ್ಯಗ್ನೇ ವಿತತಮಂತರಾ

ಯತ್ತೇ ಪವಿತ್ರಮರ್ಚಿಷ್ಯಗ್ನೇಯೆಂಬ ಶ್ರುತಿ
ಮತ್ತೆ ನಿನ್ನ ಖಂಡವ ಸುಡದೆ
ಚಿತ್ತಜನಯ್ಯನ ಚಕ್ರವೆಂಬ ಪವಿತ್ರದಿ
ತಪ್ತವಾ[ಹ]ದೆ ಭೂಷಣವೊ ೨೮

ಶ್ವೇತೋರ್ಧ್ವ ಹಿರಣ್ಮಯವೆಂಬ ವೇದ
ಮತಿವಂತರ ಮನಕೆ ಒಪ್ಪುವುದೇ
ಸೂತಗೆ ಸೌವರಣೀನ ಪ್ರಕಾಮನೇದ-
ಚ್ಯುತನ ನೋಡು ಬಿಡು ದುರಾಗ್ರಹವ ೨೯

**ಶ್ಲೋಕ :** ದದ್ಯಾದ್ಗೋ ಭೂ ಹಿರಣ್ಯಾದಿ ಚಕ್ರಾಂಕಿತಭುಜಾಯವೈ
ಅವೈಷ್ಣವಾಯ ದಾತವ್ಯಂ ನೋದಬಿಂದುಂ ನ ತಂಡುಲಂ

ಗೋ ಭೂ ಹಿರಣ್ಯಾದಿ ದಿವ್ಯದಾನಂಗಳ
ಸ್ವಭುಜದಿ ಚಕ್ರಾಂಕಿತ ಉಳ್ಳವಗೆ
ಈ ಭುವನದೊಳಗೆ ಕೊಡಬೇಕು ಎಂತೆಂದು ನಾ-
ಗಭೂಷಣನೆ ನಿರ್ಣೈಸಿದನೋ ೩೦

ಒಂದು ಬಿಂದೋದಕ ಒಂದು ತಂಡುಲವನ್ನು
ಇಂದಿರೇಶನ ಭಕ್ತನಲ್ಲದವನಿಗೆ
ಎಂದೆಂದು ಕೊಡಬಾರದೆಂದು ಚಂದ್ರಮೌಳಿ
ಎಂದನಾಗಿ ಸಂದೇಹ ಸಲ್ಲ ೩೧

**ಶ್ರುತಿ :** ತಪ್ತಂ ಚಕ್ರಂ ದ್ವಿಭುಜಂಧಾರ್ಯತೇತಿ
ದ್ವಿರೇಖಂ ಊರ್ಧ್ವಪುಂಡ್ರಂ ಕರೋತಿ

ಈ ಮಾಧ್ಯಂದಿನ ಶ್ರುತಿಗನೆರಡು ಖಂಡದಿ
ತಪ್ತಚಕ್ರಧಾರಣವ ನಿರ್ಣೈಸಿತು

ಇದು ಶಿಷ್ಟವಚನವಾದುದರಿಂದ ತಪ್ತ ಚ-
ಕ್ರ ಧಾರಣೆಯಿಲ್ಲದವ ವೇದಬಾಹ್ಯ
ಮದನನಯ್ಯನ ಪುರದಿ ಮುಕ್ತರಿಗಿದು ಬೇಕು
ಇದ[ಜರೆವನಂಧಂತಮಕೈದುವ] ೩೨

**ಶ್ಲೋಕ :** ಯೇ ಕಂಠಲಗ್ನ ತುಳಸೀ ನಳಿನಾಕ್ಷಮಾಲಾಃ
ಯೇ ಬಾಹುಮೂಲ ಪರಿಚಿಹ್ನಿತ ಶಂಖಚಕ್ರಾಃ
ಯೇ ವಾ ಲಲಾಟಫಲಕೇ ಲಸದೂರ್ಧ್ವಪುಂಡ್ರಾಃ

ತೇ ವೈಷ್ಣವಾ ಭುವನಮಾಶು ಪವಿತ್ರಯಂತಿ

ಸಂತಪ್ತ ಚಕ್ರಶಂಖವ ಭುಜಯುಗದಲ್ಲಿ
ಮಂತ್ರಪೂರ್ವಕವಾಗಿ ಧರಿಸಿ
ಅಂತಕನ ಭಟರನಂಜಿಸಿ ಮೆರೆವ ಲಕ್ಷ್ಮೀ-
ಕಾಂತನ ಭಜಕರೊಪ್ಪಿಹರು ೩೩

ಹೊಳೆವ ಹನ್ನೆರಡೂರ್ಧ್ವಪುಂಡ್ರಗಳಿಟ್ಟು ಶ್ರೀ
ತುಳಸೀ ಪದುಮಾಕ್ಷಿಯ ಸರವ
ಅಲಸದೆ ಧರಿಸಿದ ಪರಮವೈಷ್ಣವರು ಈ
ಇಳೆಯ ಪಾವನವ ಮಾಡುವರು ೩೪

ಯೇ ಕಂಠಲಗ್ನ ಎಂಬ ಪದ್ಮಪುರಾಣ
ಶ್ಲೋಕದಿ ಗೌರಿದೇವಿಗೆ
ಶ್ರೀಕಂಠ ತಾನೆ ನಿರ್ಣೈಸಿ ಪೇಳಿದನಾಗಿ
ಲೋಕರ್ಗೆ ಸಂದೇಹ ಸಲ್ಲ ೩೫

ಬ್ರಹ್ಮ ಕ್ಷತ್ರಿಯ ವೈಶ್ಯ ಶೂದ್ರರು ತಮ್ಮತಮ್ಮ
ಕರ್ಮಮಾರ್ಗದಲಿ ನಡೆಸಿದ
ಚಿನ್ಮಯರೂಪ ಎಲ್ಲರೊಳು ತಾನೆ ಪೊಕ್ಕು
ನಿರ್ಮಲಪಥಕ್ಕೆರಗಿಸಿದ ೩೬

ಬ್ರಹ್ಮಚಾರಿ ಗೃಹಸ್ಥ ವಾನಪ್ರಸ್ಥದ
ಧರ್ಮದಿ ವಿಪ್ರರ ನಡೆಸಿ
ನಿರ್ಮಮ ಯತ್ಯಾಶ್ರಮದಿ ಮತ್ತವರನೆ
ನಮ್ಮ ನಾರಾಯಣ ನಡೆಸಿದ ೩೭

ಕಾಲಕಾಲದಿ ಮಳೆಯ ಕರೆಸಿದ ಇಳೆಯೊಳು
ಕಾಲಕಾಲದಿ ಬೆಳೆಯ ಬೆಳೆಸಿದ
ಕಾಲಕಾಲದಿ ಕಳವ ನಿಲಿಸಿದ ಶ್ರೀಕೃಷ್ಣ
ಕಾಲಕಾಲದಿ ಫಲವ ಮೆಲ್ಲಿಸಿದ ೩೮

ವಿಧವೆಯರಿಲ್ಲ ಹರಿಪಾಲಿಸುವ ಕೃತಯುಗದಿ
ವಿಧುರರೆನಿಸುವ ನರರಿಲ್ಲ
ಮದುವೆಯಿಲ್ಲದವರಿಲ್ಲ ವಿಧಿಯ ಮೀರುವರಿಲ್ಲ
ಅಧಮರೆನ್ನಿಸುವ ನರರಿಲ್ಲ ೩೯

ಬಂಜೆಯರಿಲ್ಲ ಪತಿಗಂಜದ ಸತಿಯರಿಲ್ಲ
ಸಂಜೆಯಲಿ ಮಲಗುವವರಿಲ್ಲ

ಕಂಜನಾಭನ ಮರೆವ ಜನರಿಲ್ಲ ಅತಿಥಿಗಳು
ಭುಂಜಿಸದೆ ಉಂಬುವವರಿಲ್ಲ ೪೦

ಅಂಧಪಂಗುಗಳಿಲ್ಲ ನೂರುವರುಷಗಳಿಂದ
ಕುಂದಿ ಬದುಕುವ ಜನರಿಲ್ಲ
ನಿಂದ್ಯಮಾರ್ಗದಿ ನಡೆವ ಜನರಿಲ್ಲ ನಮ್ಮ ಗೋ-
ವಿಂದ ಪಾಲಿಸುವ ಕಾಲದಲಿ ೪೧

ಎಲ್ಲಿ ನೋಡಲು ತೀರ್ಥಕ್ಷೇತ್ರಂಗಳು ಮ-
ತ್ತೆಲ್ಲಿ ನೋಡಲು ಯಜ್ಞಾದಿಗಳು
ಎಲ್ಲ ಕಡೆಯಲ್ಲು ದೇವತಾ ಪೂಜೆಯು
ಬಲ್ಲಿದ ಕೃಷ್ಣ ನಡೆಸಿದ ೪೨

ಎಲ್ಲಿ ನೋಡಿದರು ವೇದಘೋಷಗಳು ಮ-
ತ್ತೆಲ್ಲಿ ನೋಡಲು ತಪಸ್ವಿಗಳು
ಎಲ್ಲಿ ನೋಡಲು ಧನ ಧಾನ್ಯಂಗಳು ಮ-
ತ್ತೆಲ್ಲಿ ನೋಡಲು ಕೃಷಿವರ್ಧಕರು ೪೩

ಎಲ್ಲಿ ನೋಡಲು ದಾನ ಎಲ್ಲಿ ನೋಡಲು ಗಾನ
ಎಲ್ಲಿ ನೋಡಲು ಹರಿಯ ಧ್ಯಾನ
ಎಲ್ಲಿ ನೋಡಲು ಸ್ನಾನ ಎಲ್ಲಿ ನೋಡಲು ಜ್ಞಾನ
ಎಲ್ಲಿ ನೋಡಲು ವ್ಯಾಖ್ಯಾನ ೪೪

ಎಲ್ಲೆಲ್ಲಿ ನೋಡಲು ದಿವ್ಯ ದೇವಸ್ಥಾನ
ಎಲ್ಲೆಲ್ಲಿ ನೋಡಲು ರಥೋತ್ಸವ
ಎಲ್ಲಿ ನೋಡಲು ಮುತ್ತುರತ್ನಪಸಾರೆಗಳು
ಎಲ್ಲಿ ನೋಡಲು ದಿವ್ಯನಗರಿ ೪೫

ಎಲ್ಲಿ ನೋಡಲು ಭಕ್ತಿ ಎಲ್ಲಿ ನೋಡೆ ವಿರಕ್ತಿ
ಎಲ್ಲಿ ನೋಡಲು ವಾದಶಕ್ತಿ
ಎಲ್ಲಿ ನೋಡಲು ಯುಕ್ತಿ ಎಲ್ಲಿ ನೋಡಲು ಭುಕ್ತಿ
ಎಲ್ಲಿ ನೋಡಲು ವಿಪ್ರವೃತ್ತಿ ೪೬

ಎಲ್ಲಿ ನೋಡಲು ಪರಿಪರಿಯಾಟಗಳು
ಎಲ್ಲಿ ನೋಡಲು ನೃತ್ಯವಾದ್ಯ
ಎಲ್ಲಿ ನೋಡಲು ಚಿತ್ರಭೂಷಣ ವಸನ
ಚೆಲ್ವ ನಾರೀನರಸ್ತೋಮ ೪೭

ಗಂಧ ಕಸ್ತೂರಿ ಕುಂಕುಮ ರಂಜಿಪ ರಸ-

ದಿಂದ ಮಾಡಿದ ಓಕುಳಿಯ
ಚೆಂದದಿಂದೊಬ್ಬರೊಬ್ಬರಮೇಲೆ ಚೆಲ್ಲಿ ನವ-
ಚಂದ್ರವದನೆಯರೊಪ್ಪಿದರು ೪೮

ಒಂದು ಗರ್ಭದ ಕೂಸು ಒಂದು ಶಿಶು ಮಡಿಲೊಳು
ಒಂದು ಬೆನ್ನಲಿ ಕಟ್ಟಿಕೊಂಡು
ಒಂದು ಮುಂದಾಡಿಸುವ ಇಂದುಮುಖಿಯರ
ಸಂದಣಿಯು ಮನೆಮನೆಗಳಲ್ಲಿ ೪೯

ಒಳಗೆ ಮೊಸರ ಕಡೆವ ಸಂಭ್ರಮ ಹೊರಗೆ ಆ-
ಕಳ ಕರೆವ ರವಸ ತುಂಬಿಹುದು
ಅಳುವ ಮಕ್ಕಳ ತೊಟ್ಟಿಲೊಳಗಿಟ್ಟು ಪಾಡುವ
ಲಲನೆಯರ ಗಂಭೀರ ನಾದ ೫೦

ಯತಿಗಳ ಪೂಜೆ ವಿಪ್ರರ ಪೂಜೆ ಮನೆಮನೆಯೊ-
ಳತಿಥಿ ಅಭ್ಯಾಗತರ ಪೂಜೆ
ಶ್ರುತಿವಿಹಿತ ನಿತ್ಯನೈಮಿತ್ತಿಕ ಕರ್ಮಗಳು
ವಿತತವಾದವು ಲೋಕದೊಳಗೆ ೫೧

ಗಂಡುಮಕ್ಕಳ ಮದುವೆ ಮುಂಜಿಗಳ ಸಂದಣಿ
ತಂಡತಂಡದ ಕನ್ನಿಕೆಯರ
ಉಂಡುಟ್ಟುಕೊಂಬುದಕೆ ಉಳ್ಳಂತ ಮನೆಗಳ
ಕಂಡು ಕೊಡುವ ಸಂಭ್ರಮಗಳ ೫೨

ನವಗ್ರಹಹೋಮ ನಾಂದಿಯ ಪೂಜೆಗಳ ಮಾಳ್ಪ
ಭುವನದೇವರಿಗೆ ದಕ್ಷಿಣೆಯ
ತವಕದಿಂದಲಿ ಕೊಡುತ ಮಂಗಳಾರತಿಯನೆ-
ತ್ತುವರರ್ಥಿಯಲಿ ಮುತ್ತೈದೆಯರು ೫೩

ಆಯತ್ತವಾದ ಜೋಯಿಸರೋದುವ
ಪ್ರಿಯವಾದ ಮಂಗಳಾಷ್ಟಕ
ಆಯತಾಕ್ಷಿಯರ ಧವಳ ಶೋಭನಂಗಳ
ಗಾಯನ ತುಂಬಿತಂಬರವ ೫೪

ಮುತ್ತೈದೆಯರು ಬಂದು ಮುತ್ತುರತ್ನಂಗಳ
ಅರ್ಥಿಯಲಿ ಭಿಕ್ಷವಿಕ್ಕುವರು
ತೆತ್ತಿಗರೆಲ್ಲರು ಉಡುಗೊರೆ ಉತ್ಸಹಗಳ
ಸುತ್ತಿಂದ ತಂದುಕೊಡುವರು ೫೫

ಪರಿಪರಿ ಭಕ್ಷ್ಯ ರಸಾಯನಂಗಳ ಮಾಡಿ
ಪರಿಪರಿ ಕಲಸೋಗರಗಳ
ವಿರಚಿಸಿ ವಿಪ್ರರ ಕೂಡಿ ಭೂಮವನುಂಬು
ವರ ಸಂಭ್ರಮಗಳನೇನೆಂಬೆ ೫೬

ಮಂಗಳದೇವಿಯರಸ ವಧುವರರಿಗೆ
ಮಂಗಳವೀಯಲೆಂದೆಂದು
ತ್ತುಂಗಭಾಗ್ಯಂಗಳು ಸಂಗಡಿಸುತಿರಲೆಂದು
ಅಂಗನೆಯರು ಹರಸಿದರು ೫೭

ಚಕ್ರವರ್ತಿಗಳ ಪುಟ್ಟಿಸಿ ಕಾಲಕಾಲದಿ ಭೂ-
ಚಕ್ರಪಾಲರ ಮಾಡಿಸಿದ
ವಿಕ್ರಮ ಅವರಿಗೆ ಕೊಟ್ಟು ಮತ್ತವರಿಂದ
ಸತ್ಕರ್ಮಂಗಳನೆ ನಡೆಸಿದ ೫೮

ಮತ್ಸ್ಯಕೂರ್ಮನಾಗಿ ಮತ್ತೆ ಮಹಿಯನೆತ್ತಿ
ಕೀರ್ತಿಯ ಪಡೆದ ಕಿಂಕರನ
ಮೃತ್ಯುವ ಬಿಡಿಸಿದ ಮತ್ತೆ ಬಲಿಯ ಕಿತ್ತು
ಕ್ಷತ್ರಿಯರುಕ್ಕು ತಗ್ಗಿಸಿದ ೫೯

ಸೀತೆಗಭಯವಿತ್ತ ಸೇತುಬಂಧನರಾಮ

ಮಾತುಳಕಂಸನ ಮಡುಹಿದ

ಖ್ಯಾತಬುದ್ಧನಾಗಿ ಕಾಪಥಗಳ ತೋರ್ದ
ಭೀತಕಲಿಯ ಬೀಳುಕೊಟ್ಟ ೬೦

ಶಿವನ ವೈರಿಯ ಕೊಂದ ಶ್ರುತಿಯನವನಿಗೆ ತಂದ
ಭುವನಪಾವನ ಭವ್ಯಕೀರ್ತಿ
ಇವನ ಪೋಲುವರಿಲ್ಲ ಈ ಜಗದೊಳಗೆಲ್ಲ
ಜವನಭಟರ ಜಡಿದ ಮಲ್ಲ ೬೧

ಇಂತು ಜಗಂಗಳ ಸಂತತ ಪೊರೆವನು
ಹಂತ ದೈತೇಯರ ಕೃತಾಂತ
ಚಿಂತೆಯ ನೆಗ್ಗೂತ್ತಿ ಸಂತೋಷವೀವ ಶ್ರೀ-
ಕಾಂತ ಸಂತರ ಭಾರವಾಂತ ೬೨

ಸಕಲಸುಗುಣಪೂರ್ಣ ಸಜ್ಜನದಾತಾರ
ಭಕುತವತ್ಸಲ ಭವನಾಶ

ಸುಖಚಿನ್ಮಯಾಕಾರ ಶುದ್ಧ ದೋಷವಿದೂರ
ನಿಖಿಲೇಶ ನಿನ್ನ ನಂಬಿದೆನೊ   ೬೩

ಉಂಬೋದುಡುವುದು ಲಕ್ಷ್ಮಿದೇವಿಯದು ತಲೆ-
ಗಿಂಬಿಟ್ಟು ಮಲಗುವ ನೆಲದ
ಇಂಬು ಕುಂಭಿಣಿಯದು ಇವರಾಳ್ದನಲ್ಲೆಂಬ
ಡಂಭಕನೆಲ್ಲಿಹನೆಂತೆಂಬ ೬೪

ಉಂಡಮನೆಗೆ ಎರಡು ಬಗೆವ ಭಂಡರ ಕಂಡು
ಪಂಡಿತ ಜನರು ಮನ್ನಿಸರು
ಕಂಡಕಂಡವರ ಮಾತ ಕೇಳದಲೆ ಬಲ್ಲವರು
ಪಾಂಡವಪ್ರಿಯನ ಮನ್ನಿಸಿರೊ   ೬೫

ಅದರಿಂದ ಸಕಲ ವಾದಿಗಳು ನಾರಾಯಣನ
ಪದಪದುಮವ ನಂಬಬೇಕು
ಇದು ಪಕ್ಷಪಾತದ ನುಡಿಯಲ್ಲವೆಂಬೋ
ಬುಧರು ತಾವೇ ವಿಚಾರಿಸಲಿ   ೬೬

ಸೀತೆಗೆ ಚಿಂತಿಸಿ ಭೀತಿಯ ತೋರಿಸಿ
ಭೂತನಾಥನ ಯಾತ್ರೆಮಾಡಿ
ಪ್ರೀತಿಯಿಂ ಮುನಿಗಳಿಗೆ ನಮಿಸಿ ನಮಿಸಿ ಕೃಷ್ಣ
ದೈತೇಯರಿಗೆ ಮೋಹವಿತ್ತ   ೬೭

ಬೈಯಲು ಈರೇಳು ಜಗವ ಬಾಯೊಳು ತೋರಿ
ಮೈಯೊಳು ವಿಶ್ವರೂಪವನು
ಕೈಯಲ್ಲಿ ಬೆಟ್ಟವನೆತ್ತಿ ಶ್ರೀಕೃಷ್ಣ
ಪ್ರಿಯರ್ಗೆ ಸುಜ್ಞಾನವಿತ್ತ ೬೮

ಮೊಲೆಯನೂಡಲು ಶಿಶು ಪಾಲ ಕೊಂಬಂತೆ ಸ-
ತ್ಕುಲಕೆ ಸಮ್ಯಜ್ಞಾನ ಬಂತು
ಜಲದೊಳಗೆ ಮೊಲೆಯ ಪಿಡಿದ ಜಿಗುಳಿಗಳಂತೆ
ಖಳರು ಕುತ್ಸಿತಕ್ಕೆರಗಿದರು   ೬೯

ಮಿಶ್ರಚರಿತ್ರದಿಂ ಮಿಶ್ರಜೀವರಿಗೆ ಸಂ-
ಮಿಶ್ರ ಜ್ಞಾನವನೆ ಬೆರೆಸುವ
ವಿಸ್ಮಯವಲ್ಲದೆ ಮಾತನಾಡದೆ ಹರಿ
ಸ್ವಸ್ವಯೋಗ್ಯತೆಗೆ ಮತಿಯಿತ್ತ   ೭೦

**ಶ್ಲೋಕ :** ನಿತ್ಯ ಜ್ಞಾನಾನಂದ ಬಲಾ ದೇವಾ ನೈವಂತು ದಾನವಾಃ

ದುಃಖೋಪಲಬ್ಧಿಮಾತ್ರಾಸ್ತೇ ಮಾನುಷಾಸ್ತೂಭಯಾತ್ಮಕಾಃ
ತೇಷಾಂ ಯದನ್ಯಥಾ ಜಾತಂ ತದುಪಾಧಿಕೃತಂ ಮತಂ
ವಿಜ್ಞಾನೇನಾತ್ಮಯೋಗ್ಯೇನ ತಚ್ಚವೀರ್ಯಮುಪಸ್ಥಿತಂ
ಸಮ್ಯಕ್ ಜ್ಞಾನಂತು ದೇವಾನಾಂ ಮಾನುಷಾಣಾಂತು ಮಿಶ್ರಿತಂ
ವಿಪರೀತಂ ತು ದೈತ್ಯಾನಾಂ ಜ್ಞಾನಂತ್ರೇಧಾ ವ್ಯವಸ್ಥಿತಂ

ಸುಖದುಃಖರೂಪರು ಮಧ್ಯಮಜೀವರು
ಸುಖಮಾತ್ರರೂಪರುತ್ತಮರು
ಸುಖಹೀನದುಃಖರೂಪರು ಅಧಮಜೀವರು
ವಿಕೃತಿಯಿಲ್ಲಿದಕೆ ಎಂದೆಂದು ೭೧

ಈ ನಿತ್ಯಸುಖವೇ ಕೈವಲ್ಯ ಉತ್ತಮಮತಿಗೆ
ಆ ನಿತ್ಯದುಃಖಾದಧಮರು
ಈ ನ್ಯಾಯದಿಂದ ಸ್ವರೂಪಸುಖ ದುಃಖವೆ
ಮಾನುಷರಿಗೆ ನಿತ್ಯಬದ್ಧ ೭೨

ಲಿಂಗದೇಹವೆಂಬ ಪ್ರಾಕೃತದೇಹದ
ಸಂಗದಿಂದ ಸಂಸಾರದಲ್ಲಿ
ಕಂಗೊಳಿಸವು ಗಡ ಈ ಲಿಂಗದೇಹದ
ಭಂಗವಪ್ಪಂತೋರುವುದು ೭೩

ಈಗಿದ್ದ ಸುಖದುಃಖ ಎಲ್ಲರಿಗೂ ಸರಿ–
ಭಾಗವೆಂದೊಬ್ಬೊಬ್ಬರಿಗೆ
ಮೇಗುಂಬ ಸ್ವರೂಪಸುಖದುಃಖವೆ ಮಿಶ್ರ–
ರಿಗು ಸಂಸೃತಿ ಆಗಬೇಕು ೭೪

ಸುಖದುಃಖವೆರಡು ಕೂಡಿಹುದು ಸಂಸಾರವೆಂಬುದು
ಸಕಲ ಬುಧರಿಗೆ ಸಮ್ಮತವು
ಪ್ರಕೃತಿ ಹೋದಮೇಲೆ ಚಿದ್ರೂಪ ಸುಖದುಃಖ
ವಿಕೃತಿಯದಕೆ ಭಾವವಿಲ್ಲ ೭೫

ಅದರಿಂದ ತನುಭೃತ್ಸ್ವಭಾವ ಸಂಪ್ರಾಪ್ತವೆಂಬೊ
ದಿದೆ ಮಿಕ್ಕುದೆಲ್ಲುಪಾಧಿಕ
ಬುಧರೆಲ್ಲ ನೋಡಿ ಈ ಫಲಕೆ ತುದಿಯೊಳು ತ್ರಿ–
ವಿಧರಿಗು ಲಿಂಗಭಂಗ ಬೇಕು ೭೬

ಅಲ್ಲದಿದ್ದರೆ ಜೀವ ತ್ರಿವಿಧ ಸ್ವಭಾವಕ್ಕೆ
ಕಲ್ಲು ಹಾಕಿದವ ಕೋವಿದನೆ
ಅಲ್ಲಿ ಇಲ್ಲಿ ಇಲ್ಲವೆಂದು ಪೇಳುವ ಜನರು

ಬಲ್ಲರೆ ಇದರ ಭಾವವನು ೭೭

ಬಲ್ಲಿದ ಹರಿಗೆ ವೃಥಾಸೃಷ್ಟಿ ಸಲ್ಲದು
ಥಲವ್ಯಾತಕೆ ಮಾನವನಿಗೆ
ಚೆಲ್ಲಿ ಪೋಪುದೆ ಬರಿದೆ ಅವರು ಆದಿಕಾಲ–
ದಲ್ಲಿ ಮಾಡಿದ ಸಾಧನಗಳು ೭೮

ಮೂರುವಿಧ ಸಾಧನದಿಂದ ಮೂವರಿಗು
ಬೇರೆ ಬೇರೆ ಫಲ ಬೇಕು
ಓರಂತೆ ಶಾಸ್ತ್ರದಲೆಂಬಾ ಶ್ರುತಿಗೆ ಹಾನಿ
ಬಾರದಿರದು ಇಂತಲ್ಲದಿರೆ ೭೯

ಭಕ್ತಿದ್ವೇಷಗಳಿಗೆ ಫಲವುಂಟೆಂಬುದು ವೇದ
ದುಕ್ತಿ ಮಧ್ಯಮಜೀವರಲ್ಲಿ
ವ್ಯರ್ಥವಾದರೆ ಶ್ರುತಿಅರ್ಥವು ಕೆಡುವುದು
ನಿತ್ಯಶ್ರುತಿಯ ಕೆಡಿಸದಿರು ೮೦

ಅದರಿಂದ ತ್ರಿವಿಧ ಜೀವರಿಗು ಲಿಂಗದೇಹ
ತುದಿಯೊಳು ಹೋಹುದೆಂಬುವುದು
ವಿಧುಗಳಿಗೆ ಸಮ್ಮತವಿದನರಿಯದ ಮೂಢ
ಒದರಿದರೇನು ಫಲವಹುದು ೮೧

ತತ್ವಜ್ಞಾನ ಮಿಶ್ರಜ್ಞಾನ ಮಿಥ್ಯಾಜ್ಞಾನ
ವ್ಯಕ್ತಿಯಿಂದ ಲಿಂಗದೇಹ
ಉತ್ತಮಮಧ್ಯಮಾಧಮ ಜೀವರೊಳು ಪೊಕ್ಕು
ಮತ್ತೆ ತ್ರಿವಿಧ ಭೋಗಬಹುದು ೮೨

ವಿರಜೆಯೆಂಬ ಪುಣ್ಯನದಿಯಿಂದ ಕೆಲವರಿಗೆ
ಪರಿದು ಪೋಪುದು ಲಿಂಗದೇಹ
ಉರಗನ ಹೆಡೆ(ಪೊರೆ?)ಯಂತೆ ಜ್ಞಾನ ಪಕ್ವವಾಗೆ
ಇರಲರಿಯದು ಕೆಲಬರಿಗೆ ೮೩

ಜ್ಞಾನಕ್ಕೆ ಹಿರಿಯತನ ಕೊಡಬೇಕು ಎಂತೆಂದು
ಶ್ರೀನಾಥ ವಿರಜಾನದಿಯಲ್ಲಿ
ಜ್ಞಾನಿಗಳ ಮುಳುಗಿಸಿ ಮುಕ್ತರಮಾಡಿ ತ–
ನ್ನಾನುಗರೊಳು ಕೂಡಿಕೊಂಬ ೮೪

ಹೀನರಿಗೆ ಮೈಲಿಗೆಯ ವಸ್ತ್ರ ಪೋದರೆ ಸಾಕು
ಸ್ನಾನವವರಿಗೆ ಬೇರೆ ಬೇಡ

ಶೇಷಶಯನನೆ ಬಾ ದೋಷ'ದೂರನೆ ಬಾ
ಭಾಸುರಕಾಯ ಹರಿಯೆ ಬಾ
ಭಾಸುರಕಾಯ ಹರಿಯೆ ಬಾ ಶ್ರೀಕೃಷ್ಣ ವಿ-
ಲಾಸದಿಂದೆಮ್ಮ ಹಸೆಗೆ ಬಾ ೭೭

ಕಂಜಲೋಚನನೆ ಬಾ ಮಂಜುಳಮೂರ್ತಿ ಬಾ
ಕುಂಜರವರದಾಯಕನೆ ಬಾ
ಕುಂಜರವರದಾಯಕನೆ ಬಾ ಶ್ರೀಕೃಷ್ಣ ನಿ-
ರಂಜನ ನಮ್ಮ ಹಸೆಗೆ ಬಾ ೭೮

ಆದಿಕಾಲದಲ್ಲಿ ಆಲದೆಲೆಯ ಮೇಲೆ
ಶ್ರೀದೇವಿಯರೊಡನೆ ಪವಡಿಸಿ
ಶ್ರೀದೇವಿಯರೊಡನೆ ಪವಡಿಸಿದ ಶ್ರೀಕೃಷ್ಣ
ಮೋದದಿಂದೆಮ್ಮ ಹಸೆಗೆ ಬಾ ೭೯

ಆದಿಕಾರಣನಾಗಿ ಆಗ ಮಲಗಿದ್ದು
ಮೋದಜೀವರ ತನ್ನುದರದಲಿ
ಮೋದ ಜೀವರ ತನ್ನುದರದಲಿ ಇಂಬಿಟ್ಟ ಅ-
ನಾದಿ ಮೂರುತಿಯೆ ಹಸೆಗೆ ಬಾ೮೦

ಚಿನ್ಮಯವೆನಿಪ ನಿಮ್ಮ ಮನೆಗಳಲ್ಲಿ ಜ್ಯೋ-
ತಿರ್ಮಯವಾದ ಪದುಮದಲ್ಲಿ
ರಮ್ಮೆಯರೊಡಗೂಡಿ ರಮಿಸುವ ಶ್ರೀಕೃಷ್ಣ
ನಮ್ಮ ಮನೆಯ ಹಸೆಗೆ ಬಾ ೮೧

ನಾನಾವತಾರದಲಿ ನಂಬಿದ ಸುರರಿಗೆ
ಆನಂದವೀವ ಕರುಣಿ ಬಾ
ಆನಂದವೀವ ಕರುಣಿ ಬಾ ಶ್ರೀಕೃಷ್ಣ
ಶ್ರೀನಾರಿಯೊಡನೆ ಹಸೆಗೇಳು ೮೨

ಬೊಮ್ಮನ ಮನೆಯಲ್ಲಿ ರನ್ನದ ಪೀಠದಿ ಕುಳಿತು
ಒಮ್ಮನದಿ ನೇಹವಮ್ಮಾಡುವ
ನಿರ್ಮಳ ಪೂಜೆಯ ಕೈಕೊಂಬ ಶ್ರೀಕೃಷ್ಣ ಪ-
ರಮ್ಮ ಮೂರುತಿಯೆ ಹಸೆಗೆ ಬಾ೮೩

ಮುಖ್ಯ ಪ್ರಾಣನ ಮನೆಯಲ್ಲಿ ಭಾರತಿಯಾಗ
ಲಿಕ್ಕಿ ಬಡಿಸಿದ ರಸಾಯನವ
ಸಕ್ಕರೆಗೂಡಿದ ಪಾಯಸ ಸವಿಯುವ
ರ'ಕ್ಕಸವೈರಿಯೆ ಹಸೆಗೆ ಬಾ ೮೪

ರುದ್ರನ ಮನೆಯಲ್ಲಿ ರುದ್ರಾಣಿ ದೇವಿಯರು
ಭದ್ರಮಂಟಪದಿ ಕುಳ್ಳಿರಿಸಿ
ಸ್ವಾದನ್ನಗಳ ಬಡಿಸಲು ಕೈಗೊಂಡ
ಮುದ್ದುನರಸಿಂಹ ಹಸೆಗೆ ಬಾ ೮೫

ಗರುಡನ ಮೇಲೇರಿ ಗಗನಮಾರ್ಗದಲ್ಲಿ
ತರತರದಿ ತುತಿಪ ಸುರಸ್ತ್ರೀಯರ
ಮೆರೆವ ಗಂಧರ್ವರ ಗಾನವ ಸವಿಸುವ
ನರಹರಿ ನಮ್ಮ ಹಸೆಗೆ ಬಾ ೮೬

ನಿಮ್ಮಣ್ಣನ ಮನೆಯ ಸುಧರ್ಮ ಸಭೆಯಲ್ಲಿ
ಊರ್ಮ್ಮಿಯರಸ ನಮಿಸಿದ
ಧರ್ಮರಕ್ಷಕನೆನಿಪ ಕೃಷ್ಣ ಕೃಪೆಯಿಂದ ಪ-
ರಮ್ಮ ಮೂರುತಿಯೆ ಹಸೆಗೆ ಬಾ ೮೭

ಇಂದ್ರನ ಮನೆಗ್ಹೋಗಿ ಅದಿತಿಗೆ ಕುಂಡಲವಿತ್ತು
ಅಂದದ ಪೂಜೆಯ ಕೈಗೊಂಡು
ಅಂದದ ಪೂಜೆಯ ಕೈಗೊಂಡು ಸುರತರುವ
ಇಂದಿರೆಗಿತ್ತ ಹರಿಯೆ ಬಾ ೮೮

ನಿಮ್ಮ ನೆನೆವ ಮುನಿಹೃದಯದಲಿ ನೆಲಸಿದ
ಧರ್ಮರಕ್ಷಕನೆನಿಸುವ
ಸಮ್ಮತವಾಗಿದ್ದ ಪೂಜೆಯ ಕೈಗೊಂಡ ನಿ-
ಸ್ಸೀಮಮಹಿಮ ಹಸೆಗೇಳು ೮೯

ಮುತ್ತಿನ ಸತ್ತಿಗೆ ನವರತ್ನದ ಚಾಮರ
ಸುತ್ತ ನಲಿವ ಸುರಸ್ತ್ರೀಯರ
ನೃತ್ಯವ ನೋಡುತ್ತ ಚಿತ್ರ ವಾದ್ಯಂಗಳ ಸಂ-
ಪತ್ತಿನ ಹರಿಯೆ ಹಸೆಗೆ ಬಾ ೯೦

ಎನಲು ನಗುತ ಬಂದು ಹಸೆಯ ಮೇಲೆ
ವನಿತೆ ಲಕುಮಿಯೊಡಗೂಡಿ
ಅನಂತ ವೈಭವದಿ ಕುಳಿತ ಕೃಷ್ಣನ ನಾಲ್ಕು
ದಿನದುತ್ಸವವ ನಡೆಸಿದರು ೯೧

ಅತ್ತೇರೆನಿಪ ಗಂಗೆ ಯಮುನೆ ಸರಸ್ವತಿ ಭಾ
ರತಿ ಮೊದಲಾದ ಸುರಸ್ತ್ರೀಯರು
ಮುತ್ತಿನಕ್ಷತೆಯನು ಶೋಭನವೆನುತಲಿ ತ
ಮ್ಮರ್ತಿಯಳಿಯಗೆ ತಳೆದರು ೯೨

ರತ್ನದಾರತಿಗೆ ಸುತ್ತ ಮುತ್ತನೆ ತುಂಬಿ
ಮುತ್ತೈದೆರೆಲ್ಲ ಧವಳದ
ಮುತ್ತೈದೆರೆಲ್ಲ ಧವಳದ ಪದನ ಪಾಡುತ್ತ
ಲೆತ್ತಿದರೆ ಸಿರಿವರಗೆ  ೯೩

ಬೊಮ್ಮ ತನ್ನರಸಿಯ ಕೂಡಿ ಬಂದೆರಗಿದ
ಉಮ್ಮೆಯರಸ ನಮಿಸಿದ
ಅಮ್ಮರರೆಲ್ಲರು ಬಗೆಬಗೆಯ ಉಡುಗೊರೆಗಳ
ರಮ್ಮೆಯರಸಗೆ ಸಲಿಸಿದರು  ೯೪

ಸತ್ಯಲೋಕದ ಬೊಮ್ಮ ಕಾಸ್ತುಭರತ್ನವನಿತ್ತ
ಮುಕ್ತಸುರರು ಮುದದಿಂದ
ಮುತ್ತಿನ ಕಂಠಸರವ ಮುಖ್ಯಪ್ರಾಣನಿತ್ತ
ಮಸ್ತಕಮಣಿಯ ಶಿವನಿತ್ತ  ೯೫

ತನ್ನರಸಿಯಕೂಡೆ ಸವಿನುಡಿ ನುಡಿವಾಗ ವ-
ದನದಲಿದ್ದಗ್ನಿ ಕೆಡದಂತೆ
ವಹ್ನಿಪ್ರತಿಷ್ಠೆಯ ಮಾಡಿ ಅವನೊಳಗಿದ್ದ
ತನ್ನಾಹುತಿಯಿತ್ತ ಸುರರಿಗೆ  ೯೬

ಕೊಬ್ಬಿದ ಖಳರೋಡಿಸಿ ಅಮೃತಾನ್ನ ಊಟಕ್ಕೆ
ಉಬ್ಬಿದ ಹರುಷದಲಿ ಉಣಿಸಲು
ಉಬ್ಬಿದ ಹರುಷದಲಿ ಉಣಿಸಬೇಕೆಂದು ಸಿಂಧು
ಸರ್ಬರಿಗೆಡೆಯ ಮಾಡಿಸಿದ  ೯೭

ಮಾವನ ಮನೆಯಲ್ಲಿ ದೇವರಿಗೌತನವ ದಾ-
ನವರು ಕೆಡಿಸದೆ ಬಿಡರೆಂದು ದಾ
ನವರು ಕೆಡಸದೆ ಬಿಡರೆಂದು ಶ್ರೀಕೃಷ್ಣ
ದೇವಸ್ತ್ರೀವೇಷವ ಧರಿಸಿದ  ೯೮

ತನ್ನ ಸೌಂದರ್ಯದಿಂದುನ್ನಂತಮಯವಾದ ಲಾ-
ವಣ್ಯದಿ ಮೆರೆವ ನಿಜಪತಿಯ
ಹೆಣ್ಣುರೂಪವ ಕಂಡು ಕನ್ನೆ ಮಹಲಕ್ಷುಮಿ ಇವ
ಗನ್ಯರೇಕೆಂದು ಬೆರಗಾದಳು  ೯೯

ಲಾವಣ್ಯಮಯವಾದ ಹರಿಯ ಸ್ತ್ರೀವೇಷಕ್ಕೆ
ಭಾವಕಿಯರೆಲ್ಲ ಮರುಳಾಗೆ
ಮಾವರ ಸುಧೆಯ ಕ್ರಮದಿಂದ ಬಡಿಸಿ ತನ್ನ
ಸೇವಕ ಸುರರಿಗುಣಿಸಿದ ೧೦೦

ನಾಗನ ಮೇಲೆ ತಾ ಮಲಗಿದ್ದಾಗ
ಆಗಲೆ ಜಗವ ಜತನದಿ
ಆಗಲೆ ಜಗವ ಜತನದಿ ಧರಿಸೆಂದು
ನಾಗಬಲಿಯ ನಡೆಸಿದ ೧೦೧

ಕ್ಷುಧೆಯ ಕಳೆವ ನವರತ್ನದ ಮಾಲೆಯ
ಮುದದಿಂದ ವಾರಧಿ ವಿಧಿಗಿತ್ತ
ಚದುರವರವ ವಾಯುದೇವರಿಗಿತ್ತ
ವಿಧುವಿನ ಕಲೆಯ ಶಿವಗಿತ್ತ ೧೦೨

ಶಕ್ರಮೊದಲಾದ ದಿಕ್ಪಾಲಕರಿಗೆ
ಸೊಕ್ಕಿದ ಚೌದಂತ ಗಜಂಗಳ
ಉಕ್ಕಿದ ಮನದಿಂದ ಕೊಟ್ಟ ವರುಣದೇವ ಮದು
ಮಕ್ಕಳಾಯುಷ್ಯವ' ಬೆಳೆಸೆಂದ ೧೦೩

ಮತ್ತೆ ದೇವೇಂದ್ರಗೆ ಪಾರಿಜಾತವನಿತ್ತ
ಚಿತ್ತವ ಸೆಳೆವಪ್ಸರ ಸ್ತ್ರೀಯರ
ಹತ್ತುಸಾವಿರ ಕೊಟ್ಟ ವರುಣದೇವ ಹರಿ
ಭಕ್ತಿಯ ಮನದಿ ಬೆಳೆಸೆಂದ ೧೦೪

ಪೊಳೆವ ನವರತ್ನದ ರಾಸಿಯ ತೆಗೆತೆಗೆದು
ಉಳಿದ ಅಮರರಿಗೆ ಸಲ್ಲಿಸಿದ
ಉಳಿದ ಅಮರರಿಗೆ ಸಲ್ಲಿಸಿದ ಸಮುದ್ರ
ಕಳುಹಿದನವರ ಮನೆಗಳಿಗೆ ೧೦೫

ಉನ್ನಂತ ನವರತ್ನಮಯವಾದ ಅರಮನೆಯ
ಚೆನ್ನೇಮಗಳಿಂದ ವಿರಚಿಸಿ
ತನ್ನ ಅಳಿಯನಿಗೆ ಸ್ಥಿರವ ಮಾಡಿಕೊಟ್ಟ
ಇನ್ನೊಂದು ಕಡೆ ಅಡಿ ಇಡದಂತೆ ೧೦೬

ಹಯವದನ' ತನ್ನ ಪ್ರಿಯಳಾದ ಲಕ್ಷುಮಿಗೆ
ಜಯವಿತ್ತ ಕ್ಷೀರಾಂಬುಧಿಯಲ್ಲಿ
ಜಯವಿತ್ತ ಕ್ಷೀರಾಂಬುಧಿಯಲ್ಲಿ ಶ್ರೀಕೃಷ್ಣ
ದಯದಿ ನಮ್ಮೆಲ್ಲರ ಸಲಹಲಿ ೧೦೭

**ಫಲಶ್ರುತಿ**

ಈ ಪದನ ಮಾಡಿದ ವಾದಿರಾಜಮುನಿಗೆ
ಶ್ರೀಪತಿಯಾದ ಹಯವದನ

ತಾಪವ್  ಕಳೆದು ತನ್ನ ಶ್ರೀಚರಣ ಸ
ಮೀಪದಲ್ಲಿಟ್ಟು ಸಲಹಲಿ ೧೦೮

ಇಂತು ಸ್ವಪ್ನದಲ್ಲಿ ಕೊಂಡಾಡಿಸಿಕೊಂಡ ಲಕ್ಷುಮೀ
ಕಾಂತನ ಕಂದನೆನಿಸುವ
ಸಂತರ ಮೆಚ್ಚಿನ ವಾದಿರಾಜೇಂದ್ರಮುನಿ
ಪಂಥದಿ ಪೇಳಿದ ಪದವಿದು   ೧೦೯

ಶ್ರೀಯರಸ ಹಯವದನಪ್ರಿಯ ವಾದಿರಾಜ
ರಾಯ ರಚಿಸಿದ ಪದವಿದು
ಆಯುಷ್ಯ ಭವಿಷ್ಯ ದಿನದಿನಕೆ ಹೆಚ್ಚುವುದು ನಿ–
ರಾಯಾಸದಿಂದ ಸುಖಿಪರು   ೧೧೦

ಬೊಮ್ಮನ ದಿನದಲ್ಲಿ ಒಮ್ಮೊಮ್ಮೆ ಈ ಮದುವೆ
ಕ್ರಮ್ಮದಿ ಮಾಡಿ ವಿನೋದಿಸುವ
ನಮ್ಮ ನಾರಾಯಣನಿಗೂ ಈ ರಮ್ಮೆ ಗಡಿಗಡಿಗೂ ಅಸು
ರಮ್ಮೋಹನವೆ ನರನಟನೆ   ೧೧೧

ಮದುವೆಯ ಮನೆಯಲ್ಲಿ ಈ ಪದನ ಪಾಡಿದರೆ
ಮದುಮಕ್ಕಳಿಗೆ ಮುಂದವಹುದು
ವಧುಗಳಿಗೆ ವಾಲೆಭಾಗ್ಯ ದಿನದಿನಕೆ ಹೆಚ್ಚುವುದು
ಮದನನಯ್ಯನ ಕೃಪೆಯಿಂದ   ೧೧೨

೩೪೦

**ಗುಂಡಕ್ರಿಯೆ**

ಬರಿದೆ ಸಂಸಾರದಿ ಜರಿದೆ ಮರೆದೆ
ಹರಿ ನಿನ್ನ ಅನುಸರಿಸುತಿರದೆ
ಕರಿ ದೇವದೇವಯೆನ್ನೆ
ಕರುಣಿ ಕಣ್ತೆರೆದೆ ತರಿದೆ ಮಕರಿಯ
ಮುಖವ ನೀ ಬೇಸರದೆ
ವರದೇಶ ಪಾಹಿಯೆನೆ ಅಜಮಿಳನ
ಪೊರೆದೆ ಮುರಿದೆ ಯಮಭಟರ
ತರಿದೆ ಪಾಶಗಳ ಕರೆದೆನ್ನ ಹಯವದನ
ಒರೆದೆ' ತತ್ವಗಳ ಮೆರೆದೆ ಮಹಿಮೆಯ
ನಿನಗಿದೊಂದರಿದೆ ೧

ದೇಹವಿಲ್ಲದೆ ಬೇರೆ ಜೀವವಿಲ್ಲೆಂಬನೆ
ಮೋಹದ ನಿನ್ನ ಹೆಂಡತಿ ಸಾಯಲೇತಕೆ
ಹಾಹಾ ಎಂದಳುವೆ ವಾದಿ
ನೇಹಪಾತುರವಾದ ಪೂರ್ವಕಾಯಕ್ಕೇ-
ನು ಹಾನಿ ಬಂದಿತು ಪೇಳಾ
ಬಾಹುಗಳಿಂದದನಪ್ಪಿ ರಮಿಸಬೇಕು
ನೀ ಹೇಳಿದ ಪಂಥಕೆ
ಶ್ರೀಹಯವದನ ಇಂತಲ್ಲದಿದ್ದರೆ ನಗುವ
ಈ ಹದನರಿಯದವನ ಮತ ದುರ್ಮತ
ಸಾಹಸ ಸಾಕು ಸಾಕು ೨

ಎಲ್ಲವಿದ್ದರು ಶ್ವಾಸವೊಂದಿಲ್ಲವೆಂಬನೆ
ಬಲ್ಲಿದ ಡೊಂಬನ ಸತಿ ಪವನವ ಕಟ್ಟಿ
ನಲ್ಲಿವಾಗಂಬರದಿ
ಕುಳ್ಳಿರ್ದ ದಾರವು ಕಡಿದ ಮೇಲೆ ತಾ
ನಿಲ್ವಳು ಚಲಿಸದಂತೆ
ತೊಲ್ಲಗಿದಸು ಮತ್ತದೆಲ್ಲೇದೆಂಬ ಯುಕ್ತಿ
ಸಲ್ಲದಲ್ಲ ನಿನಗೆ
ಬಲ್ಲವಧೂತರು ಪ್ರಾಣಮಾರ್ಗವ ತಡೆದು
ಚೆಲ್ವಹಯವದನನ ಮೆಚ್ಚಿಸಿ ಶೈಲಾಗ್ರದಿ
ತಲೆಯೂರಿ ತಪಿಸರೆ ೩

ಸ್ಯಾದೆಂಬ ವಾದಿ ನಾವೆಂಬ ಪ್ರಮೇಯವ
ಸಾಧಿಸಬೇಕಾಗಿ ವಾದಿಪೆಯೆಂತೊ

ಬಾಧಿಪ ಮಾತನಜ್ಞಾ
ಬೋಧನಿಗ್ರಹ ತಾನೆ ಬಾರದೆ ಬಿಡದು
ಮೊದಲಿಗೆ ಸೋತೆಯಲ್ಲ
ಆದಿಯನರಿಯದವನ ಮತವೆಂತೊ
ಈ ಧರಾಂತಕೆ ಮೆಚ್ಚರು
ವೇದವನೊಯಿದು ವಿಧಿಗೆ ಬೋಧಿಸಿದ ದು–
ರ್ವಾದಿಗಜೇಂದ್ರಪಂಚಾನನ ಹಯವದ–
ನಾದಿ ನಾರಾಯಣನು ೪

ತಾನೋರ್ವನ್ಯೆವರಾಚಾರ್ಯರೆಂಬ ಮತ
ಹೀನವೆಂಬನು ಮತ್ತೊಬ್ಬನ ನುಡಿಯೆಂತೊ
ನಾನಾಯುಕ್ತಿಯ ಮಾಡುವ
ಜನನ ಮರಣ ಹಸಿವು ತೃಷೆ ನಾನಾ ವ್ಯ–
ಸನ ಸರ್ವರಿಗೆ ಸರಿ
ಮಾನವರೆಲ್ಲರು ಮರುಳರು ನಾನೇ ಪ್ರ–
ವೀಣನೆಂದರೆ ನಗರೆ
ಆನೆಂಬಹಂಕೃತಿಯಿಂದ ಜಗದೊಳು
ನೀನೆ ಹೀನನಾಹೆ ಹಯವದನನ ಬಲ್ಲ
ಜಾಣಜನರ ಕೇಳು ೫

ತಾನೊಬ್ಬನ್ಯೆದುಮತಜನರೊಡನೆ
ರಣರಂಗದಿ ನಿಂತು ಜಯಿಸುವುದೆಂತ್ಯೆಯ
ನಾನಾವಚನಂಗಳು
ನಾನಾಯುಕ್ತಿಗಳೊಬ್ಬನ ಮಾತಿನಿಂದಲೆ
ಹೀನಾವಾಗಿ ಪೋಪು[ವೆ]
ಅನಾದಿಯ ವೇದವೆಂಬ ಬಲು ಪ್ರ
ಮಾಣನೊಲ್ಲದವಗೆ ಕಾಣದೆ
ಮೇಲಣ ಪದವಿಯ ನೊರೆವ ಪ್ರ
ವೀಣತೆ ಬಾರದಾಗಿ ಹಯವದನ
ತಾ ನಿಗಮವ ತಂದ ೬

ಇದ್ದ ದೇವಮಾನವರ ಮಾತಿನೊಳು
ಶ್ರದ್ಧೆಯ ಮಾಡುವರು ಲೋಕದವರು
ಬುದ್ಧಸ್ವರೂಪದಿಂದ
ಆದ್ಯನಾದ ನಾರಾಯಣನೆ ಬಂದಿಲ್ಲಿ
ಪೇಳ್ದ ಸಿದ್ಧಾಂತವನು
ಗದ್ದುಗನ್ನವ ಮಾಡಲುದ್ಭವಿಸಿದ ಕತೆ
ಸಿದ್ಧವಾಗಲಿಲ್ಲವೆ

ಬುದ್ಧಿವಂತರೆಲ್ಲ ಪೇಳ್ದ ಪೇಳ್ದಪರಿ
ಶುದ್ಧ ಕಾರಣ ಶೃತಿಯೆನಿಪ ಹಯವದನ
ನುದ್ಧರಿಸಿದ ವಿದ್ಯೆಯ ೭

ತನ್ನಮೊಗವ ತಾ ಕಾಣಲರಿಯದಲೆ
ಕನ್ನಡಿಯನು ತಾಹ ಮನ್ನುಜಜಾತಿಯ
ಮೊನ್ನೆಮೊನ್ನೆಗೆ ಸರ್ವಜ್ಞ
ತನ್ನನ್ನೆ ಕೂಡಿರ್ದ ನಾಡಿಯ ತೋರಿಸಿ
ತನ್ನುವಿನ ಸ್ಥಿತಿಯ
ಅನ್ಯರ ಕೇಳನೆ ಪಂಚಾಂಗದೊಂದೊಂದು
ದಿನ್ನ ದಿನ್ನ ನೋಡನೆ
ಎನ್ನಾಳ್ವ ಹಯವದನ ಕುದುರೆಮೊಗದಿ ವ್ಯಾ
ಖ್ಯಾನ್ನ ಮಾಡುವಗೆ ಕೂಡುವುದು ಕಾಣೊ
ಅನ್ನುಪಮ ಶಕುತಿ ೮

ಎಲ್ಲೆಲ್ಲಿ ತುಂಬಿದ್ದ ವಿಷ್ಣುವೆ ನೀನವರ
ಬಲ್ಲೆ ಬಲ್ಲೆ ವಿಶ್ವತಶ್ಚಕ್ಷು ನೀನೆ ಗಡ ತೋ
ರ[ಲ್ಲಿ] ತೋರದಿರಲಿ ನೀನೆಬಲ್ಲೆ
ಬಲ್ಲೆ ಕೈವಲ್ಯವ ಕೊಡಲು ಬಿಡಲು ನೀನೆ
ಬಲ್ಲೆ ಬಲ್ಲೆ ಶರಣರಿಗೆ
ಒಲಿದು ಖಳರ ಗೆಲ್ಲುವುದು ಬಲ್ಲೆ
ಬಲ್ಲೆ ಮಾಯಾಪತಿಯೆ
ಕಲ್ಲು ಕಂಬದಿ ಮೂಡಿದ ಭಕ್ತವತ್ಸಲ
ಸಲ್ಲುವುದೋ ಹಯವದನ ಎ-
ನ್ನಾಳುವ ಕರುಣಿ ನೀ ಬಲ್ಲೆಬಲ್ಲೆ೯

ರುದ್ರರೋದನವೆಂಬ ಹೊನ್ನಗಂಡನ ಕಾಯ
ದರ್ಥವ ಸೆಳೆವ ಹೆಣ್ಣನೊಬ್ಬೊಬ್ಬರ
ಗುದ್ದಿಸಿಕೊಲ್ವ ಮಣ್ಣ ತೊ
ರೆದು ಬಾಳುವ ಮಾನವನಾವ ಚ-
ತುರ್ದಶ ಭುವನದೊಳು
ಹೊದ್ದಿದ್ದ ದುಗ್ಧವಾರಿಧಿ ಮಧ್ಯದಲ್ಲಿ
ಇದ್ದು ತನ್ನುದರದಲಿಪ್ಪ
ಪದ್ಮಿಯ ಸಡ್ಡೆಗೊಳ್ಳದೆ ಕುವರನ ನಾಭಿ
ಪದ್ಮದಿ ಪೆತ್ತ ಹಯವದನನೊಬ್ಬನೆ
ಗೆದ್ದಸಿದ್ಧಕಾಣಿರೊ ೧೦

ಮನೆಯ ಮೇಲಣ ಕಿಚ್ಚು ಮನೆಯೊಳಗಿನ ಕರ್ಮ

ಕನುಕೂಲವಾದ ಬಗೆಯ ಪೇಳುವೆ ವಾದಿ
ಕಾನನ ಮರದ ನೆಳಲು
ಜನಪದದೊಳಗಣ ತಾಪ ಕಳೆವುದೆ ಕ-
ಳ್ಳನ ಕಳುಹದೆ ಶೂಲಕ್ಕೆ
ಅನಘರಿಗಪ್ಪಣೆಕೊಡುವ ಅರಸಿನಂತೆ
ಇನಿತು ಕಾರಣರಾಶಿಯ
ಘನತರ ಕಾರ್ಯ ಸರ್ವೇಶ್ವರ ನಮ್ಮ
ವಿನುತ ಹಯವದನನೊಲ್ಲದಿದ್ದರೆ ಮೇ-
ಲಣಪದಕೆಂತೇರುವೆ ೧೧

ಕರ್ಮವೊಂದೇ ಸಾಕು ಬೊಮ್ಮವೇಕೆಂಬುವ
[ನಿಮ್ಮಹಿಯೊಳು]ಯಜ್ಞಾದಿ ಸತ್ಕರ್ಮವ
ಸುಮ್ಮನೆ ಮಾಡುವನೆ
ನಿಮ್ಮ ಮಖವ ಮಾಡಬೇಕೆಂಬ ಶ್ರುತಿ ನಮ್ಮ
ಬೊಮ್ಮನ ಪೇಳಿತಾಗಿ
ಅಮ್ಮಮ್ಮ ಸತ್ವದನುಡಿ ತಪ್ಪಿದರೆ ಸಾಧ್ಯ
ಸಮ್ಮತಿಪ್ಪದೇಕೊ
ಹೆಮ್ಮೆಯ ಬಿಡು ವಾದಿ ಹಯವದನನೆಂಬ ಪರ-
ಬೊಮ್ಮನ ನಂಬು ಕೈವಲ್ಯ ಬೇಕಾದರೆ
ಇಮ್ಮನ ಮಾಡಬೇಡ ೧೨

ಇನ್ನೊಬ್ಬವಾದಿ ಘಟಪಟಾದಿ ತತ್ವ
ವನ್ನು ನುಡಿದನ್ನ ಬಂಧ ಪರಿವುದೆಂತೊ
ಮಣ್ಣು ತಂದು ಶೋಧಿಸಿ
ಎನ್ನಿತಾಗಬೇಕೋ ಅನ್ನಿತವ ಕೂಡಿ
ನಿರ್ಣೈಸಿ ಘಟವ ಮಾಡ್ದ
ಚೆನ್ನಯ್ಯನೆಂಬ ಕುಂಬಾರನೇತಕೆ ಪೋಗ
ಉನ್ನಂತ ಮುಕುತಿಪಥಕ್ಕೆ
ಎನ್ನೊಡೆಯ ಹಯವದನ ಇಂತಿವರ ಯುಕ್ತಿ
ಶೂನ್ಯ ಮಾತಿಗೆ ಮೆಚ್ಚ ನಾನ್ಯಃಪಂಥವೆಂಬ
ಆಮ್ನಾಯವ ಪೇಳ್ದವ ೧೩

ತನ್ನ ನಾಲಿಗೆಯನ್ನು ತಾ ಕತ್ತರಿಸುವವ
ಇನ್ನೇನು ನುಡಿವನೊ ಕಡಿವ ಕೊಡಲಿಯನು
ಮೊನ್ನೆಯ ಮುರಿದವನು
ವನ್ನದ ತರುಗಳ ಕಡಿವನೇನೋ ಮೂಢ
ನಿನ್ನ ವೇದಾಂತವನು
ಮನ್ನಿಸದೆ ಪುಸಿಯೆಂಬ ವಾದಿ ಜಗ

ವನ್ನು ಇನ್ಯಾತರಿಂದ
ಬನ್ನಬಡಿಸಿ ಕೆಡಿಸುವೆ ನಿನ್ನರ್ಥವ
ಇನ್ನೆಂತು ಸಾಧಿಪೆ ಹಯವದನನವರೊಳು
ಎಂತು ನಿಂತು ವಾದಿಪೆ ೧೪

ನೇಹ ನಾನಾಸ್ತಿ ಕಿಂಚನವೆಂಬ ಶ್ರುತಿ ನಮ್ಮ
ಶ್ರೀಹರಿಯಲ್ಲಿಪ್ಪ ಗುಣರೂಪಂಗಳ
ವ್ಯೂಹಕ್ಕೆ ಭೇದವಿಲ್ಲ
ಸಾಹಸ ಸತ್ವ ನಿತ್ಯತ್ವ
ಮಹತ್ವವೆಲ್ಲವು ಸಮವೆಂದು
ಊಹಿಸಿ ಏಕಮೇವಾದ್ವಿತೀಯ ಯೆಂ-
ಬೀ ಹಾಡು ಲಯಕಾಲದಿ
ಈ ಹದಿನಾಲ್ಕು ಲೋಕವಿಲ್ಲೆಂದೈಸೆ
ಮೋಹವ ಬಿಡು ಹಯವದನ ಮಾಡುವ ಜಗ
ದಾಹಾನಿ ಯಾತರಿಂದ ೧೫

ಅನ್ಯಮಿಶಮೆಂಬ ಶ್ರುತಿಯ ಕೇಳು ದ್ವಾಸು
ಪರ್ಣಸಯುಜಾಸಹವೆಂಬ ವೇದವ ನಂಬೊ
ನಿನ್ನ ಬೆನ್ನ ಬಿಡದಿಹ
ಅನೇಕ ಜನ್ಮದ ಕ್ಲೇಶವ ನೋಡು ಇ
ನ್ನನ್ಯವೆಂದರೆ ಪುಸಿಯೆ
ಅನ್ನಶ್ಚನ್ನನ್ಯೋ ಎನಿಸಿ ಮುಕುಂದನು
ಪೂರ್ಣಸುಖನಲ್ಲವೆ
ಮಾನ್ಯ ಹಯವದನ್ನ ತ್ರಿವಿಕ್ರಮ
ನನ್ನು ದಾಸೋಹಂ ಎನ್ನೋ ಶಾಸ್ತ್ರೋಕ್ತಿ
ಮನ್ನಿಸಿ ಬಾಳೊ ಜೀವ ೧೬

ಅರಸಿನ ಆಳೆಂದು ಬಾಳುವ ಮನುಜರ
ಸ್ಥಿರತರ ಭಾಗ್ಯವ ನೀವೆಲ್ಲ ನೋಡಿರೊ
ಅರಸು ತಾನೆಂಬವಗೆ
ತರತರದಲಿ ಬಾಹ ಕ್ಲೇಶರಾಶಿಗಳ
ಸೆರೆಮನೆಯಲ್ಲಿಕ್ಕೆಂಬ
ಹರಿ ತಾನೆಯೆನ್ನಲು ಪೌಂಡ್ರಕ ದನುಜನ
ಶಿರವ ಚೆಂಡಾಡಿದನು
ನರನಹಂಬ್ರಹ್ಮ ಎನೆ ಕೊಲ್ಲದುಳಿಪನೆ
ಸರ್ವೇಶ್ವರ ವೇದವ ತಂದ ಹಯವದನ
ಇಂತೆಂಬರ ಕೊಲ್ಲೆಂಬ ೧೭

ಲೋಕಮಾತೆಯೆಂದು ಲಕುಮಿಯ ನಾಮ ಅಂ-
ಬಿಕದೇವಿಯೆಂದು ಗೌರಿಯ ಪೆಸರು ವಿ-
ವೇಕಿಗಳೆಲ್ಲ ಕೇಳಿ
ಈ ಕುಮತಿಗಳಚ್ಯುತೋಹಂ ಶಿವೋಹಂ ಎಂ-
ದೇಕೆ ಪೇಳುವರೈಯ
ಬೇಕಾಯಿತೇನೋ ಮಾತೃಗಾಮಿಯೆಂಬ
ಈ ಕಷ್ಟದ ಬೈಗಳು
ಶ್ರೀಕಾಂತ ಹಯವದನ ಯೋನಃಪಿತಾಯೆಂಬ
ಸೂಕ್ತಕ್ಕೆ ದೇವತೆಯಾದ ಕಾರಣ
ಇವನ ಕುವರರು ನಾವು೧೮

ಅದ್ವೈತವಾದಿ ನಿನ್ನ ವಿದ್ವನ್ಮತದಲ್ಲಿ
ಬುದ್ಧದೇವಗೆ ಪೆಸರಿದ್ದ ಕಾರಣದಿಂದ
ಅದ್ವಯವಾದಿಯೆಂದು
ರಾದ್ಧಾಂತದ ಗುರು ಶುದ್ಧೋದ‌ನ ಮುನಿ ಪೇ
ಳಿದ ಬುದ್ಧ ಮತವ
ಶುದ್ಧಾಗಿ ಶೋಧಿಸಿ ಸಿದ್ಧಾಂತ ಕತೆಗಳ
ಬದ್ಧವಾದುದಿಲ್ಲವೆ
ಬುದ್ಧಿವಂತರು ಕೂಡಿ ದ್ವೈತಮತವನ್ನೆ
ಹೊದ್ದಿ ಬದುಕಿ ಸಿರಿಹಯವದನನ ಪಾದ
ಪದ್ಮವನ್ನೆ ಭಜಿಸಿರೊ ೧೯

ವ್ಯೋಮಕೇಶನೊಬ್ಬ ವ್ಯೋಮಪಾದನೊಬ್ಬ
ಭ್ರಾಮಕ ವರವೀವನೊಬ್ಬ ಕೊಲ್ಲುವನೊಬ್ಬ
ಕ್ಷಾಮದಕ್ಷಾದಿಗಳ
ಸೀಮೆಯರಿಯೆ ಕೊಂದವನೊಬ್ಬ ರಕ್ಷಿಸಿ-
ದ ಮಹಾಪುರುಷನೊಬ್ಬ
ರಾಮಾದ್ಯವತಾರದಿಂದ ಮುರಿದ ಬಿಲ್ಲು
ಆ ಮಹೇಶನದಲ್ಲವೆ
ಶ್ರೀಮುಡಿಯಲಿ ವಿಷ್ಣುಪದಿಯೆಂಬ ನದಿ ಪೊತ್ತ
ಆ ಮಹಾದೇವ ಹಯವದನನೆಂತಾಹ
ನೀ ಮಾನವನೆಂತಾಹೆಯೊ ೨೦

ಸ್ತುಹಿ ಶ್ರುತಂ ಗರ್ತಸದಾ ಯುವಾನೆಂ-
ದಾ ಹರನ ಕೂಡೆ ವೇದ ಪೇಳಿತಾಗಿ ಆ
ಮಹಾಪುರುಷನೊಬ್ಬ
ಮಹಿಮೆಯುಳ್ಳ ನರಸಿಂಹನ ತನ್ನ ಹೃದಯ
ಗುಹೆಯೊಳಗಿಪ್ಪನ

ಸಿಂಹನಂತೆ ಭಯಂಕರವೀವನ ಸ್ತುತಿ–
ಗಾ ಹಂತ ಹರಿಯೆ ಬೇಕು
ಶ್ರೀಹಯವದನನೆ ಇವನೆಂದು ಸಿದ್ಧ ನ–
ಮ್ಮ ಹಿರಿಯರ ಮತವನು ಜರಿವೆಯೆಂತೊ
ಸೋಹಂ ಎಂಬ ಮನುಜ ೨೧

ನೀ ನಾಯಿ ಎಂದರೆ ಕೋಪವೇಕೋ ಮನುಜ
ಹೀನರೈಕ್ಯವ ಪೇಳಲದು ಬೈಗಳಾದರೆ
ಮನೆಮನೆಗಳಿಗೆ ಪೋಗಿ
ದೀನತನವ ತೋರಿ ತನುವ ಪೊರೆಯುವ
ನಾನಾ ಜೀವರೈಕ್ಯವ
ಶ್ರೀನಾಥಗೆ ಪೇಳ್ವುದೇಸು ಬೈಗಳೊ ಮೂಢ
ಗುಣಶೂನ್ಯನೆಂಬುವುದು
ಮಾನವರಿಗೆ ಬೈಗಳಾದರೆ ಹಯವ
ದನಗೆ ಗುಣವಿಲ್ಲವೆಂಬೋದು ಬೈಗಳ
ಲ್ಲೇನೆಲೊ ಬಲುಮೂಢ ೨೨

ನರರೊಳು ಪರನಿಂದೆ ಸಲ್ಲದು ಸರ್ವೇ
ಶ್ವರನ ನಿಂದಿಸುವುದು ಧರ್ಮವೇನೋ ಸಜ್ಜ
ನರೊಡನಾಡೆಂದೆಂದು
ದುರುಳರ ಕೂಡಣಾಟವ ಬಿಡು ಹರಿಯ
ಚರಣಸೇವೆಯ ಮಾಡು
ದುರಿತ ರಾಶಿಗಳನೀಡ್ಯಾಡು ಭಕ್ತಿಯ ಬೇಡು
ಪರಮಪುರುಷನ ನೋಡು
ಸಿರಿಹಯವದನನ ಕರುಣದಿಂದಲಿ ನಿನಗೆ
ಸಿರಿಸೇರುತಿಪ್ಪುದು ಪರಗತಿಯಪ್ಪುದು
ನಿರುತ ಸುಖವು ತಪ್ಪದು೨೩

ಶೋಧಿಸೆ ಬಂದ ಭೃಗುವನರಿಯದೆ ವೃಥಾ
ಕ್ರೋಧವ ಮಾಡಿದಕಾರಣ ವಿಧಿ ರುದ್ರ
ರಾಧಿಕ್ಯರಾದುದಿಲ್ಲ
ವೇದ ಈಶ ಸರ್ವಜ್ಞ ಎಂದು ಪೇಳ್ದ
ಆದಿವಸ್ತುವ ಕಾಣ್ಯೆಯ
ಬೋಧ'ವಿಲ್ಲದೆ ಮಾನವರಂತೆ ಇರುತಿಪ್ಪ
ಆ ದೇವರೆಂತಪ್ಪರೈ
ಶ್ರೀಧವನೆದೆಯನೊದ್ದಾಗಲೆ ಸರ್ವ
ವೇದಿ ಹಯವದನಾದಕಾರಣ ಕೋಪಿ
ಸದೆ ಹೆ'ದ್ದೈವನಾದ ೨೪

ಆವನ್ನ ರೋಮಕೂಪದೊಳಗೀ ಜೀವ
ರಾವಾಸವಾದ ಬ್ರಹ್ಮಾಂಡ ರಾಸಿಗಳು
ತೀವಿಪ್ಪುದ್ಯತ್ರಪ್ರಿಯಾ
ಹಿ ವಿಷ್ಣು ಪರಮಾಣ್ವಾದ್ಯಯೆಂದು ಪೇಳ್ದ
ಶ್ರೀ ವೇದವ್ಯಾಸ ತಾನೇ
ಈ ವಿಷ್ಣು ರೋಮಕ್ಕೆಣೆಯಿಲ್ಲವೆನ್ನೆ ಈ
ದೇವಗಿನ್ನಾವನೆಣೆ
ಶ್ರೀ ವಾಸುದೇವ ಹಯವದನ ಸರ್ವೇಶ
ದೇವರೆಲ್ಲ ಇವನ ದಾಸದಾಸರಿನ್ನು
ವಿವಾದವ್ಯಾಕೊ ಜೀವ ೨೫

ಸ್ವರ್ಗಾದಿ ಸತ್ಯಂತವಾದ ಮೇಲಣಲೋಕ
ಕಗ್ರಣಿಗಳಾದ ದೇವರ ನೋಡು ಮಧ್ಯದೊ
ಳೊಗ್ಗಿಹ ಭೂಲೋಕದಿ
ಮುಗ್ಗಿಹ ಮನುಷ್ಯರಾಶಿಯ ನೋಡು ಕೆ
ಳಗ್ಗಣ ಪಾತಾಳದಿ
ದುರ್ಗರ್ವಿ ದೈತ್ಯರ ನೋಡು ತ್ರಿವಿಧಜೀವ
ವರ್ಗಪದಾಗಮಕ್ಕೆ
ಸ್ವರ್ಗವೆ ಸಾಕ್ಷಿ ಎಲ್ಲದರಿಂದ ಮೇಲಣ
ದುರ್ಗಾಧಿಪತಿ ಹಯವದನವನೊಬ್ಬನೆ ಸ
ರ್ವಾಗ್ರೇಸರ ಕಾಣಿರೊ ೨೬

ಮೂರ್ತಿಯ ನೋಡಲು ವಿಶ್ವತಶ್ಚಕ್ಷು ಎಂ
ಬುಕ್ತಿಯರ್ಥವಾದ ಶ್ರೀಹರಿಯ ಪಿರಿಯ
ವ್ಯಾಪ್ತಿಯ ನೋಡಲಾಗಿ
ತತ್ವವೆಷ್ಟೆಷ್ಟು ಅಷ್ಟಷ್ಟರಲ್ಲಿ ವೇ
ದೋಕ್ತಿಯಿಂದಲಿ ಸರ್ವ
ವ್ಯಾಪ್ತಿ ನಾರಾಯಣಸ್ಥಿತ ಎಂಬ ಶ್ರುತಿಗೀ
ನೀತಿಗೆ ಪ್ರತಿಯಿಲ್ಲ
ಖ್ಯಾತಗುಣಗಳಿಂದ ಅಪ್ರತಿಮಲ್ಲ ಶ್ರೀ
ನಾಥ ಹಯವದನ ಮಹಿಮನಂತಗುಣ
ಯಾತಕಿಂತು ವಾದಿಪೆ ೨೭

ಆರುಶಾಸ್ತ್ರ ಬಲ್ಲವರೆಲ್ಲ ಕೇಳಿರೊ
ನಾರಾಯಣನ ನಾರಿಯರಾದ ಧಾರುಣಿ
ಸಿರಿದೇವಿಯರಿವನ
ದೂರಿದಾಗಲೆ ನಿನಗೆ ದೂರವಾಗಲು ಕಾಲ
ನೂರಲು ನೆಲವ ಕಾಣೆ

ಬಾರದು ಬಾಯಿಗೆ ಕೂಳು ಇದೆಲ್ಲವು
ಆರೇನೆಂಬರು ಕೇಳಯ್ಯಾ
ಊರೊಳಗಿನ ಪತಿವ್ರತೆಯರಿರವ ಕಂಡು
ಸಾರಹೃದಯರೆಲ್ಲ ಹಯವದನನ ಪಾದ
ಸರೋಜವನೆ ಸಾರಿರೊ ೨೮

ನರಕಕೂಪದೊಳೇಳುತ ಮುಳುಗುತ
ಹರಿದ್ವೇಷಿಗಳೆಲ್ಲ ಮಲಮೂತ್ರಗಳ ತಿಂದು
ಗಾರಹರೆಂದರಿಯ
ಪುರಾಣ ಭಾರತ ರಾಮಯಣಂಗಳ
ಪಿರಿಯರಿಂದಲಿ ಕೇಳಿ
ಓರಂತೆ ಶಾಸ್ತ್ರಾರ್ಥಗಳನ್ನೆಲ್ಲ ವಿ
ಚಾರಿಸಿ ತಿಳಿದುಕೊಳ್ಳಿ
ನಾರಾಯಣನೆಂದು ಚೀರಿದ ಅಜಾಮಿಳ
ಸೇರನೆ ಹಯವದನನ್ನರಮನೆಯ
ಸಾರಿ ತಾ ಬದುಕಿರನೆ ೨೯

ಆ ದೇವ ಈ ದೇವನೆಂದ್ಯಾಕೆ ಕಲಹ ನಾ
ನಾ ದೇಶದವರಿಗೆ ಬೇಡಿದಿಷ್ಟವನೀವ
ಸಾಧಿಸಿದ ಧನದಿ
ಈಧರೆಯೊಳಗಿರ್ದ ರಾಯಗೆ ಕೋಟಿ ದ್ರ
ವ್ಯಾದಿ ಕಡನ ಕೊಟ್ಟ
ವಾದವ ಮುರಿದ ವೆಂಕಟಗಿರಿರಾಯನಂ
ಥಾದೇವನನ್ನು ತೋರೋ
ಶ್ರೀದೇವಿಯುರದ ತಿಮ್ಮಯ್ಯರಾಯಗೆ ಪ್ರತ್ಯ
ಕ್ಷದಿ ಎಣೆಗಾಣೆ ಹಯವದನ್ನನ
ಪಾದುಪದುಮದಾಣೆ ೩೦

ಆವನ ನಾಭಿಕಮಲದಲ್ಲಿ ಪುಟ್ಟಿದ
ದೇವ ಪಿತಾಮಹಾ ಎನಿಸಿಕೊಂಬುವನಾಗಿ
ಜೀವರಾಶಿಗೆ ಎಲ್ಲ
ಈ ವಿಷ್ಣುವಿಗೆ ಆ ದಿವಿಜರೇನಾಹರೆಂದು
ಆವ ಸರ್ವೇಶನೆಂದು
ನೀವಿಟ್ಟ ಪಿಂಡವು ಆರ ಪಾಲಾಹುದೆಂದು
ಭಾವಜ್ಞರೆಲ್ಲ ಕೇಳಿ
ದೇವ ಹಯವದನನೊಲ್ಲದ ವಾದಿಗೆ
ತಾವುದಿಸಿ ತಾಯಿಲ್ಲ ಎಂಬಗಾದೆ ಬಹುದು
ಸೇವಿಸವನ ಜೀವ ೩೧

ಆದಿಕಾಲದಲ್ಲಿ ಆಲದೆಲೆಯ ಮೇಲೆ
ಶ್ರೀದೇವಿಯರೊಡನೆ ಮಲಗಿದ್ದಾಗ
ಆ ದೇವರೆಲ್ಲಿಹರೊ
ಮಾಧವನಗರಿಗೆ ಮೊದಲಾದ ವಿಧಿ
ಪೋದಾಗ ಪೋದರೆಲ್ಲ
ಆಧಾರವಾದ ತತ್ವಂಗಳೆಲ್ಲವು ಅ
ಳಿದಾಗ ಅಳಿದರೆಲ್ಲ
ವೇದ ಏಕೋ ನಾರಾಯಣಾಸೀದೆಂದು ಪೇ
ಳಿದ ಕಾರಣ ಹಯವದನನೆ ಜಗದೊ
ಳಧಿಕ ದೈವವಾದ ೩೨

ಹೊಟ್ಟೆಯೆಂಬ ಪೊನ್ನ ತೊಟ್ಟಿಲೊಳಗಿಟ್ಟು
ವಿಠ್ಠಲ ಜೀವರ ನಿದ್ರೆಗೊಳಿಸುವನು
ಸೃಷ್ಟಿಕಾಲ ಬಂದಾಗ
ಹುಟ್ಟಿಸಿ ಬಹುರೂಪದಾಟವನಾಡಿಸಿ
ಇಷ್ಟಂಗಳ ಕೊಡುವ
ದುಷ್ಟಮಕ್ಕಳ ಮಂಡೆ ಹೆಟ್ಟುವ ಕೆಲವರ
ಕಟ್ಟಲೆಯನು ಬಿಡಿಸ
ಶಿಷ್ಟರೆತ್ತಿಕೊಂಬ ಹಯವದನನ ಪಾದ
ಬಿಟ್ಟಿಯ ಕಾಂಬಂತೆ ಕಾಣದೆ ಮನ
ಮುಟ್ಟಿ ಭಜಿಸೊ ಜೀವ ೩೩

ಮಕ್ಕಳ ತಪ್ಪುಗಳ ಲೆಕ್ಕಿಸದೆ ತಾಯಿ
ಮಿಕ್ಕ ಖಳರ ತಪ್ಪು ಉಕ್ಕು ತಗ್ಗಿಸುವಳು
ಪಕ್ಷಿವಾಹನನೊಮ್ಮೊಮ್ಮೆ
ಸೊಕ್ಕಿ ನಡೆದರು ಭಕ್ತುತರ ಕಾವ
ನಕ್ಕು ಕಾರುಣ್ಯದಲಿ
ಉಕ್ಕಿದ ರಕ್ಕಸರ ಶಿಕ್ಷಿಸದೆ ಬಿಡ
ಕ್ಷಿಪಾಮ್ಯಜಸ್ರವೆಂಬ
ಅಕ್ಕೊ ಪದವ ಮತ್ಕರ್ಮಕೃನ್ಮತ್ಪರಮೆಂಬ
ಉಕ್ತಿಯನೇನೆಂಬೆ ಹಯವದನನ ಭಜಿಸಿ
ಮುಕ್ತಿಬೇಕೆಂಬುವರು ೩೪

ಎಂಬತ್ತುನಾಲಕುಲಕ್ಷ' ಯೋನಿಗಳಲ್ಲಿ
ತುಂಬಿರ್ದ ಜೀವರಿಗೀರೂಪಂಗಳೆ
ಇಂಬಾದ ಬಹರೂಪ
ಸಂಭ್ರಮದೆ ನಿಜರೂಪದಿಂದೆಸೆವ
ಕಂಬು ಚಕ್ರಾದಿಗಳ

ಎಂಬೊ ಮಾತಿಗೆ ಸಂದೇಹ ಸಲ್ಲ ಮೇ
ಲುಂಬ ಸುಖವನೀವ
ಶಂಭುಮುಖ್ಯಗುರುಗಳಿಂದ ಕೇಳಿರೊ ನಾ
ನೆಂಬಹಂಕೃತಿಯಿಂದ ಹಯವದನನ ಪಾ
ದಾಂಬುಜಕೆಂತೇರುವ ೩೫

ಒಂದೆ ಅಂಬುಧಿ ಒಂದೆ ಕಡಗೋಲು ನೇಣೊಂದೆ
ಒಂದೆ ಸಾಧನ ಸರ್ವಸಾಧನಂಗಳು ಸರಿ
ಮುಂದೆ ಪರಿವ ದೈತ್ಯರ
ವೃಂದಕ್ಕೆ ಸುಧೆಯಿಲ್ಲ ವೃಂದಾರಕರಿಗುಂಟು
ಎಂದು ನಿರ್ಣೈಸಿತಾಗಿ
ಮುಂದಣ ಮುಕುತಿಯೋಗ್ಯರಿಗುಂಟು ಇತರರಿ
ಗೆಂದೆಂದಿಗಾಗದೈಯ
ತಂದೆ ಹಯವದನನೊಲ್ಲದ ವಾದಿಗೆ
ಸಂದೇಹ ಸಲ್ಲ ಬೂದಿಯ ಹೋಮದಂದದಿ
ಎಂದೆಂದಿಗಾಹುದೈಯ ೩೬

ಕಳ್ಳಭಕ್ತರಿಗೆ ಸಲ್ಲದು ಶುಭಫಲ
ಎಲ್ಲ ಬೀಜಕೆ ಸಲ್ಲದು ಸಲ್ಲಿಕೆ
ಎಲ್ಲಿ ಯೋಗ್ಯತೆಯುಂಟೊ
ಅಲ್ಲಿಯೆ ಫಲ ಅದಿಲ್ಲದವರಿಗಿಲ್ಲ
ಬಲ್ಲಬುಧರು ಕೇಳಿರೊ
ಎಲ್ಲ ಸಾಧನಗಳೊಲ್ಲದವಗೆ ಈ
ಫಲ್ಲ ದುರ್ಲಭಕಾಣಿರೊ
ಬಲ್ಲಿದ ಹಯವದನನೊಲ್ಲಿದಾಗಲೆ ಅ
ಹಲ್ಯೆಯಿದ್ದ ಶಿಲೆ ಹೆಣ್ಣಾದವೋಲು ಇಂ
ತುಳಿದದ್ದು ಹೆಣ್ಣಾಯಿತೆ ೩೭

ಎನಗೆ ನಿನ್ನಲಿ ಭಕ್ತಿ ಇರಲಿ ಇಲ್ಲದಿರಲಿ
ಜನ ಹರಿಭಕ್ತನೆಂದೆನ್ನ ಕರೆಯಲಾಗಿ
ಮನ ಪಾಪಕೆರಗದಂತೆ
ಅನುದಿನ ನೀನೆನ್ನ ಕಾಯಬೇಕಾಯಿತು
ಅನಿಮಿತ್ತಸುಜನಬಂಧು
ಕನರಿಸಿ ಯಮಭಟರು ಮುಂದೆ ಕೊಂದರೆ ನಿನ್ನ
ಘನತೆಗೆ ಸಾಲದಯ್ಯ
ತನ್ನವರ ಹಯವದನನನ್ಯರಿಗೊಪ್ಪಿಸಿದ
ನೆನ್ನುವ ದುರ್ವಾರ್ತೆ ತಪ್ಪಿಸಿಕೊ ತಂದೆ
ಮುನ್ನಿಜನವಂದ್ಯಪಾದ ೩೮

ನಿನ್ನನೆ ನೋಡುವ ನಿನ್ನನೆ ಪಾಡುವ
ನಿನ್ನನೆ ಬೇಡುವ ನಿನ್ನ ಕೊಂಡಾಡುವ
ಜನರೊಳೆಂತಿಪ್ಪುದೈ
ಕಣ್ಣು ಕುಕ್ಕಿ ಕಿವಿಯೊಳ್ ಸುಣ್ಣಹೊಯ್ದು ಶಿರ
ವನ್ನು ಕತ್ತರಿಸುವ
ಬನ್ನಬಡಿಸಿ ಗಿಲಿಕಿಯ ಮೆಟ್ಟಿಸುವ
ಘನ್ನನರಕದ ಬಾಧೆ
ನಿನ್ನ ಮಹಿಮೆಗಿದು ಸಾಕೆ ದೇವರದೇವ
ಎನ್ನಾಳ್ದ' ಹಯವದನ್ನ ವಿಚಾರಿಸೊ
ಅನ್ನಂತ ಗುಣಪೂರ್ಣ ೩೯

ನಾ ನಿನ್ನ ಮರೆತರೂ ನೀನೆನ್ನ ಮರೆತರೆ
ಹಾನಿ ನಿನಗೆ ನಿನ್ನ ಭಕ್ತವತ್ಸಲತೆಗೆ
ಹೀನತೆ ಬಂದಿತಾಗಿ
ಆ ನಋತೇತ್ವ ತ್ಕಿಯತೇ ಕಿಂಚನಾರೇಯೆಂ
ಬಾಮ್ನಾಯ ಏನೆಂದಿತಾಗಿ
ನೀನುದಾಸೀನನಾಗೆ ಖಳರ ಸೇನೆ ಸ
ಜ್ಜನರ ಕೊಂದಿತಾಗಿ
ಶ್ರೀನಾಥ ಹಯವದನ ಶಿಶುಗಳ ತಪ್ಪನು
ಜನನಿ ಜರೆದರೆ ಜಗವೆಲ್ಲ ನಗುವುದೊ
ಜಾಣರ ಜಾಣ ನೀನು ೪೦

೩೩೯

**ಸ್ವಪ್ನಪದ**

ನೆನೆವೆ ನಾರಾಯಣನ ಪಾದವ
ನೆನೆವೆ ನಾರಾಯಣಿಯ ಚರಣವ
ನೆನೆವೆ ಪ್ರಾಣನ ಪದವ ಭಾರತೀದೇವಿಯಂಘ್ರಿಯನು
ನೆನೆದು ಶ್ರೀಹಯವದನ ಸ್ವಪ್ನದೊ
ಳೆನಗೆ ಪೇಳಿದ ಪದವ ಲೋಕದ
ಜನರಿಗಿದ ಸಂಗ್ರಹವ ಮಾಡುವೆನವನ ಕೃಪೆಯಿಂದ ೧

ಎನ್ನ ಸೇವೆಯ ಬೇಸರದೆ ದಿನ
ದಿನ್ನ ಮಾಡುವ ಮಾನವರಿಗೆ ಪ್ರ
ಸನ್ನನಾಹೆ ಕೃಪಾಳು ಎಂಬುದು ಎನಗೆ ಬಲುಬಿರುದು
ಮನ್ನದಲಿ ಬೇಸತ್ತುಕೊಂಡರೆ
ಮಣ್ಣು ಹೊಯಿಸದೆ ಮಾಣೆನದರಿಂ
ದುನ್ನತೋನ್ನತ ಪೂಜೆಗಳನನುದಿನ್ನ ಮಾಡುತಿರು ೨

ಕೇಳು ಮಾನವ ನಾನು ಭಕ್ತರು
ಪೇಳಿದಂದದಿ ನಲಿವೆನವರನು
ಲಾಲಿಸುತ ಪಾಲಿಸುವೆ ಬಿಡೆನೆಂಬುದು ನಿದಾನವಿದು
ಆಲಸವ ಮಾಡಿದರೆ ತಾಳೆನು
ಕಾಲಕಾಲದಿ ಎನ್ನ ಪೂಜೆಯ
ಮೇಲು ಮೇಲೆಂದೆನಿಸಿ ನೆರೆ ಕೊಂಡಾಡಿ ಕುಣಿದಾಡು ೩

ದೀನಮಾನವ ಕೇಳು ಭಕ್ತರ
ಧೀನನೆಂಬುದು ತಪ್ಪದವರಿ
ನ್ನೇನು ಮಾಡಿದರದನು ಕೈಗೊಂಬೆನು ಸರಾಗದಲಿ
ಹಾನಿಪಡಿಸುವೆನೆನ್ನೊಳಗುದಾ
ಸೀನವನು ಮಾಡಿದರೆ ನೀ ನೆರೆ
ಜಾಣನಾಗಿರು ಮರೆಯದೆನ್ನನುದಿನದಿ ನೆನೆಯುತಿರು ೪

ಮಿಕ್ಕದೇವಕ್ಕಳ ತೆರದಿ ನಾ ಮರೆ
ಹೊಕ್ಕವರ ಬಿಡೆನೆನ್ನ ಕರುಣಕ-
ಟಾಕ್ಷ ವೀಕ್ಷಣಖಳರ ಶಿಕ್ಷಿಸೆನ್ನವರ ರಕ್ಷಿಸುವುದು
ತಕ್ಕುದನು ತೋರಿಸುವೆ ನೀನೇ
ಸೊಕ್ಕಿ ನಡೆಯೆ ವಿಪತ್ತನಾಗಲೆ

ದಿಕ್ಕುದೆಸೆಯೆಂದೆನ್ನ ನಂಬುಲುಪೇಕ್ಷೆ ಮಾಡೆನೆಲ್ಲೆ ೫

ಅಂಜಬೇಡೆಲೆ ಮನುಜ ನಾ ಬಡ
ಕುಂಜರನ` ಕಾಯ್ದವನು ಪರರಿಗೆ
ಸಂಜೆಯನು ತೋರಿಸಿ ಧನಂಜಯನಸುವ ಪೊರೆದವನು
ಕಂಜಲೋಚನೆ ಕರೆಯೆ ವಸ್ತ್ರದ
ಪುಂಜಗಳ ಕೊಟ್ಟವಳ ಸಲಹಿದೆ
ನಂಜುಂಡನ ವೈರಿಯನು ಕುಂದಿಸಿದನುವ ಕೇಳ್ದರಿಯ ೬

ಜಲಧಿಯೊಳಗಾಡಿದೆನು ಬೊಮ್ಮಗೆ
ಕಲಿಸಿದೆನು ಶ್ರುತಿತತಿಯ ನೀರೊಳು
ಮುಳುಗಿದದ್ರಿಯನೆತ್ತಿಕೊಟ್ಟೆನು ಸುರರ ಸುಧೆಗಾಗಿ
ಇಳೆಯ ವೈರಿಯ ಕೊಂದೆ ಪಿತನಿಂ
ದಳಿವ ಶಿಶುವನೆ ಪೊರೆದ ಬಳಿಕಲಿ
ಬಲಿಯ ಬೇಡಿದೆ ರಾಯರನು ತಲೆಕೆಳಗು ಮಾಡ್ದೆನೆಲ್ಲೆ ೭

ಅಂಬುಧಿಯನಂಬಿನಲೆಸೆದೆ ಧಾತ್ರಿ ನಿ
ತಂಬಿನಿಯ ಕಂಬನಿಯ ತೊಡೆದೆ ತ್ರಿ
ಯಂಬಕನ ಹಿತಕಾಗಿ ತ್ರಿಪುರದ ವಧುಗಳ ನಾ ಕೆಡಿಸಿ
ಇಂಬುಗೊಡದಲೆ ಕಲಿಯ ಧರ್ಮಕ
ದಂಬವನು ತುಂಡಿಸಿದೆನೆನಗೆಣೆ
ಎಂಬ ದೇವನದಾವನ್ಯೆ ಈರೇಳು ಲೋಕದಲಿ ೮

ಎನ್ನ ಚರಣೋದಕವ ಶಿವ ಪಾ
ವನ್ನವೆನುತಾದರದಿ ಧರಿಸಿದ
ನೆನ್ನ ಕಾರುಣ್ಯ ಬಲದಲಾವಿಧಿ ವೇದವೋದಿದನು
ಎನ್ನರಸಿ ರಮೆ ಸಕಲಗುಣ ಸಂ
ಪನ್ನ ಸುರಮುನಿಮಾನ್ಯ ಶ್ರುತಿತತಿ
ಗಣ್ಯನೆನುತಲಿ ಮನದಿ ಮನ್ನಿಸಿ ಮುನ್ನ ವರಿಸಿದಳು ೯

ಎನ್ನ ವೈಕುಂಠಾವಲೋಕನ
ಜನ್ನರಿಗೆ ಭವಬಂಧಮೋಚನ
ಎನ್ನ ನಾಮಸ್ಮರಣೆ ಪಾಪಾಟವಿಗೆ ಕಾಳ್ಗಿಚ್ಚು
ಇನ್ನು ನೀನನ್ಯರನು ಬೀಳ್ಕೊ
ಟ್ಟೆನ್ನ ಚರಣದೊಳಿಟ್ಟು ಮನವನು
ಘನ್ನ ಭಕುತಿಯ ಮಾಡು ಸುಕೃತವ ಕೂಡು ನಲಿದಾಡು ೧೦

ಸ್ನಾನ ದಾನ ಧ್ಯಾನಗಳನನು

ಮಾನವಿಲ್ಲದೆ ಮಾಳ್ಪದದರಿಂ
ದೇನು ಹಾನಿಯು ನಿನಗೆ ಬಾರದು ಎನ್ನ ಕರುಣದಲಿ
ದೀನ ತನುವನು ಪೊರೆಯದಿರು ಬಲು
ಹೀನ ಜನರೊಡನಾಡದಿರು ಸು
ಜ್ಞಾನಿಗಳನನುಸರಿಸಿ ಎನ್ನ ಚರಿತ್ರೆಗಳ ಕೇಳು ೧೧

ನೋಡು ಪುಣ್ಯಕ್ಷೇತ್ರಗಳಲೆಡೆ
ಯಾಡು ಕೀರ್ತಿಯ ಪಾಡು ಭಕುತಿಯ
ಕೂಡು ದುರಿತಗಳನು ತರಿದೀಡ್ಯಾಡು ದಿನದಿನದಿ
ಮಾಡು ಮಾಡೆನ್ನಂಘ್ರಿ ಪೂಜೆಯ
ಬೇಡು ಮೇಲಣ ಮುಕುತಿ ಫಲವನು
ನೀಡು ಸಂತತ ಎನ್ನ ಸುಕಥಾಮೃತವ ಸುಜನರಿಗೆ ೧೨

ಗಾನರಸದಿಂ ಕೂಡಿ ಎನ್ನ ಮ
ಹಾನುಭಾವವ ತುತಿಸಲೀ ಭವ
ಕಾನನಕ್ಕೆ ಕೃಶಾನು ದುರಿತ ತಮಿಶ್ರಕಿದು ಭಾನು
ನಾನು ನನ್ನದಿದೆಂಬ ಮನದಭಿ
ಮಾನವನು ಬಿಡು ಕಂಡಕಂಡರ
ನೀನು ಯಾಚಿಸಿ ದುಃಖಸಾಗರದೊಳಗೆ ಮುಳುಗದಿರು ೧೩

ದೇವರೆಲ್ಲರು ಎನ್ನ ದಾಸರು
ಶ್ರೀವಧುವೆ ಎನ್ನರಸಿ ಜಗದೀ
ಜೀವರಾಸಿಯ ನಾನೆ ಪುಟ್ಟಿಸಿ ಮಗುಳೆ ರಕ್ಷಿಪೆನು
ಲಾವಕರ ಕೊಲಿಸುವೆನು ನರಕವ
ನೀವೆ ಸ್ವರ್ಗವನಿತ್ತು ಸುಜನರ
ಕಾವೆನಿದು ವೇದಾಂತ ಸಿದ್ಧಾಂತದ ರಹಸ್ಯಕಣಾ ೧೪

ಏಷ ಸರ್ವೇಶ ನಾನೆಂದೆನದೆ ನಿ
ರ್ದೋಷ ಮಂಡೂಕೋಪನಿಷತಿ
ನ್ನೇಷ ಭೂತಾಧಿಪತಿ ಎನ್ನದೆ ಕಾಣ್ವರುಪನಿಷತು
ಏಷ ಸರ್ವೇಶ ನಾನೆನದೆ ವಿ
ಲಾಸದಿಂ ಋಗ್ವೇದ ಮೊದಲಾ
ಗೀ ಸಮಸ್ತವು ಜನ್ಯವೆನಿಸವು ಋಷಿಮುಖೋದ್ಗತವು ೧೫

ಅಗ್ನಿ ದೇವರೊಳಧಮ ಮಿಕ್ಕ ಸು
ರರ್ಗಳೇ ಮಧ್ಯಮರು ಸಲೆ ಸ
ರ್ವರ್ಗೆ ವಿಷ್ಣುವೆ ಪರಮನೆಂಬೀ ವೇದ ಬ್ರಾಹ್ಮಣವೆ
ಬಗ್ಗಿಸಿತು ಕುಜನರ ಶಿರಂಗಳ

ಸುಗ್ಗಿಯೆನಿಸಿತು ಜ್ಞಾನಸಸಿಯಪ
ವರ್ಗವೀವೆನು ನಾನು ನನಗೆಣೆಯಾರು ಜಗದೊಳಗೆ ೧೬

ದ್ವಾಸುಪರ್ಣ ಶ್ರುತಿಗಳೆಂಬೀ
ಶ್ರೀಶನೆಂದೊಬ್ಬಗೆಯ ಖಗ ನಾ
ನಾ ಶರೀರದೊಳಿದ್ದು ಕ್ಲೇಶವನುಣದೆ ಇಹುದು ಗಡ
ಕ್ಲೇಶವೀ ಎರಡನೆಯ ಜೀವ ಖ
ಗೇಶನಾಜ್ಞೆಯಲಿದ್ದು ತಾನೇ
ದೇಶದೇಶದೊಳುಣುತಿಹುದು ಪೇಳುವುದ ನೆರೆನಂಬು ೧೭

ಇಂತು ಶ್ರುತಿಗಳು ಕೆಲಕೆಲವು ಶ್ರೀ
ಕಾಂತ ಚಿಂತಾದೂರನೆನುತಿವೆ
ಚಿಂತೆಯಲಿ ಬಳಲುತಿಹ ಜೀವರ ಗಣಗಳದು ಬೇರೆ
ಎಂತಿವೆಕೊ ನೀವೆಲ್ಲ ನೋಡಿರೊ
ಕಂತುಪಿತ ಖಳರಟ್ಟಿ ಭಜಕರ
ಸಂತವಿಸುವ ಸ್ವಾಮಿ ಎನುತಿವೆ ಕೆಲವು ವೇದಗಳು ೧೮

ಹಿಂದೆ ನಾನೇ ಪ್ರಾಣನೆಂದ ದೇ
ವೇಂದ್ರನಾಶಯ ವ್ಯಾಸ ತತ್ಸಂ
ಬಂಧ ಬಾಹುಳ್ಯದಲಿ ನಾನೇ ಪ್ರಾಣನೆಂದೆನಿಸಿ
ಎಂದು ತೋರನೆ ಬಲ್ಲ ಬುಧರದ
ರಿಂದ ನಾನೇ ಬ್ರಹ್ಮ ನೆಂಬೀ–
ವೃಂದದುಕ್ತಿ ಬ್ರಹ್ಮ ಸಂಬಂಧದಿಂದಲೆನಬೇಕು ೧೯

ಇವನೆ ನಾನೆಂದರಸು ಸಚಿವನ
ನೆವದಿ ನುಡಿದರೆ ಬಲ್ಲಗ್ರಾಮದ
ಲವರು ಕೂಟದಿ ಕಂಡು ರಾಯನ ಸಚಿವನೆನ್ನುವರೆ
ದಿವಿಜ ದನುಜರೊಂದಾದರಾ ಸಿಂ
ಧುವನು ಕಡೆವುದಕೆನಲು ಕೋವಿದ
ರವನಿಯಲಿ ಸಾಮಾನ್ಯ ವಚನಕೆ ಭ್ರಮಿಸಿ ಮರುಳಹರೆ ೨೦

ಬೊಮ್ಮ ಹೆಮ್ಮಗ ರುದ್ರ ಮೊಮ್ಮಗ
ಸುಮ್ಮನಸರಿಗೆ ಸುಧೆಯನೂಡಿಸೆ
ಧರ್ಮಮಯ ಕಾಲಾಖ್ಯ ಚಕ್ರವ ನಾನೆ ನಡೆಸುವೆನು
ಅಮ್ಮರೇಶಗೆ ಭಾಗ್ಯವಿತ್ತವ
ನಮ್ಮರತರು ಕಿತ್ತರಲು ದಿವಿಜರ
ಹೆಮ್ಮೆಗಳ ನಾನೋರ್ವನೆಬ್ಬಟ್ಟಿದೆನೊ ಕೇಳ್ ಮನುಜ ೨೧

ನೋಡು ರಾಮನ ಸೇವೆಗಮರರು
ಕೋಡಗದ ತನುವಾಂತು ಗಿರಿಗಳ
ಕೋಡುಗಲ್ಗಳ ಕಿತ್ತು ತಲೆಯಲಿ ಹೊತ್ತು ಮನವಿತ್ತು
ನಾಡರಿಯೆ ಜಲನಿಧಿಗೆ ಸೇತುವೆ
ಮಾಡಿ ಮದ್ಭಟರೆನಿಸಿಕೊಳ್ಳರೆ
ಮೂಢನಾಗಿರಬೇಡ ನಾನೇ ಸಕಲಸುರರೊಡೆಯ೨೨

ನಾನಾದುಃಖ ನಿಧಾನಿಸಲು ಸಲೆ
ದೀನ ಜೀವನು ದುಃಖಭರಿತನು
ನೀನೆ ನೋಡು ಧನಾದಿ ಹಾನಿಯಲಳುವ ಜೀವರನು
ಏನನೆಂಬೆನು ರೋಗರುಜಿನದಿ
ಮಾನವನಿಗೆ ಬರುತಿಪ್ಪ ನೋವನು
ಸ್ವಾನುಭವದಲಿ ಸಿದ್ಧ ಕಂಡದನುಸುರೆ ಬಲ್ಲವರು ೨೩

ನಾನು ನನ್ನಯ ಶಕ್ತಿಯಿಂದಲೆ
ದಾನವರ ಮರ್ದಿಸುವೆ ಜೀವರಿ
ಗಾನು ಶಕ್ತಿಯ ಕೊಟ್ಟರುಂಟಿಲ್ಲದೊಡೆ ಜಡಕೆ ಸಮ
ಕಾಣು ಕುಂಟನ ಕಾಣು ಕಿವುಡನ
ಕಾಣುಕಾಣನ ಶಕ್ತಿಯಿದ್ದರೆ
ಹೀನ ವಾದಂಗಳ ಭಂಗವನೇಕೆ ಬಿಡಿಸಿಕೊಳ ೨೪

ನಾನು ಸದ್ಗುಣಪೂರ್ಣ ವಂದ್ಯನು
ಹೀನ ಗುಣದಿಂ ಜೀವನಿಂದ್ಯನು
ನಾನು ಲಕ್ಷ್ಮೀರಮಣ ಜೀವನು ಶತದರಿದ್ರನೆಲ್ಲೈ
ನಾನು ಸುರಮುನಿಸೇವ್ಯಚರಣನು
ಕಾಣು ಜೀವ ಖಳರಂಘ್ರಿಶರಣನು
ನಾನು ಸಾವಿಲ್ಲದವನು ಜೀವನ ಮೃತ್ಯು ಕೊಲುವುದೆಲ್ಲೈ ೨೫

ನಾನು ಸುಜ್ಞನು ಜೀವನಜ್ಞನು
ನಾನು ಮುಕ್ತನು ಜೀವ ಬದ್ಧನು
ನಾನು ಪಾತಕಹೀನ ಜೀವನು ಪಾಪಭರಿತನೆಲ್ಲೈ
ನಾನು ಜನ್ಮವಿದೂರ ನಾನಾ
ಯೋನಿಯಲಿ ಜನಿಸುತಿಹ ಜೀವನು
ಮಾಣು ಛಲವನು ನನ್ನ ಜನಕನ ಹೆಸರ ಹೇಳಿನ್ನು ೨೬

ದೇವಕಿಯ ಬಸುರಿನಲಿ ನಾನೇ
ದೇವಕಾರ್ಯಕೆ ಬಂದ ಬಗೆಯನು
ಭಾವಕೋವಿದರೆಲ್ಲ ತತ್ತನ್ಮೂಲ ರೂಪವನು

ಜೀವರಿಗೆ ಬೋಧಿಸರೆ ಮೃತ್ಯುವ
ಕಾವ ವೈಕುಂಠದಲಿ ಇದ್ದಾ
ಶ್ರೀವತ್ಸವನು ನೋಡು ಪೊಟ್ಟೆಯ ಬಿಟ್ಟು ಪೊರವಂಟೆ ೨೭

ಹಿಂದೆ ಜಗವನು ತನ್ನ ಬಸುರಲಿ
ನಂದಗೋಪನ ರಾಣಿ ಕಾಣಳೆ
ಚೆಂದದೆನ್ನಲಿ ವಿಶ್ವರೂಪವ ಪಾರ್ಥ ಕಾಣನೆಲೆ
ಮಂದಮತಿಯೆ ನಿಧಾನಿಸುತ್ತಿರೆ
ಅಂದದೆನ್ನಯ ದೇಹವಳಿದರೆ
ಬಂದುದೆಲ್ಲ ಚರಾಚರಗಳಿಗಂದೆ ನಿರ್ಬಂಧ ೨೮

ಮಂದಮಾನವ ಶ್ರೀನೃಸಿಂಹಗೆ
ತಂದೆ ದಾವನು ತಾಯಿ ದಾವಳು
ಮಂದರವ ಧರಿಸುವರೆ ಕೂರ್ಮನ ಪೆತ್ತವರು ಯಾರು
ಹಿಂದೆ ಬೊಮ್ಮನ ಪ್ರಳಯ ಜಲಧಿಯೊ-
ಳೊಂದೆ ವಟಪತ್ರದಲಿ ಮಲಗಿದ
ಇಂದಿರಾಪತಿಯೆನಿಪ ನಾ ನಿತ್ಯರೊಳು ನಿತ್ಯನೆಲೆ ೨೯

ಇಂತನಂತ ವಿರುದ್ಧ ಧರ್ಮಗ
ಳಾಂತ ಜೀವರಿಗೈಕ್ಯವೆಂತಿದು
ಭ್ರಾಂತಿ ಸಂತತ ತ್ಯಜಿಸದಿರಲು ಪ್ರಕಾಶತಮವಹುದೆ
ಸಂತರಿಂದ ನಿರಂತರದಿ ವೇ
ದಾಂತ ಶ್ರವಣವ ಮಾಡಿ ನೀ ದು
ರ್ಭ್ರಾಂತಿಗೊಳಗಾಗದಲೆ ಎನ್ನಯ ಗುಣವ ನೆನೆಯುತಿರು ೩೦

ಕುಂಭದಭ್ರವುಪಾಧಿಯಿದ್ದರು
ಸ್ತಂಭಿಸುವುದೇ ಸುತ್ತ ಪಾತ್ರೆಯೆ
ಇಂಬುವಡೆದಿರೆ ವ್ಯಾಪ್ತ ಚಿತ್ತಿಗೆ ಹಾನಿ ಸಲ್ಲದೆಲೈ
ಅಂಬರಾಗ್ರದ' ಸ್ವರ್ಗದಲಿ ನೀ
ನುಂಬ ಸುಖಗಳನೆಂತು ಮಾನವ
ಕುಂಭೀಪಾಕಕ್ಕಿಳಿದು ಯಾತನೆಯಂತೆ ಕೈಗೊಂಬೆ ೩೧

ಎಲ್ಲಿ ಪೋಪುದು ದೇಹ ಮತ್ತ
ಲ್ಲಲ್ಲಿ ನೆಲಸಿಹ ಚಿತ್ತೆ ಜೀವವಿ
ದಲ್ಲವಲ್ಲವಲಕ್ಷಣದಿ ಮೃತ್ಯುಗಳು ಬಹುದಾಗಿ
ಇಲ್ಲ ಜಡದೇಹಕೆ ನಡತೆ ತಾ
ನಲ್ಲಲ್ಲಿ ತುಂಬಿದ ಚಿತ್ತೆ ನಡೆಯದೆ

ಸಲ್ಲದೆಲೆ ಈ ಧರ್ಮ ಬೊಮ್ಮಗೆ ಶಕ್ತಿಯೆಂಬ ಗುಣ ೩೨

ಮಾಯೆಯಿಂತೆಂದೆಂಬುವೀ ದು
ರ್ಮಾಯಿ ತಾ ಜಡವಾದ ಕಾರಣ
ಪೋಯಿತಿನ್ನು ಉಪಾಯದಲಿ ಮತವೆಂತು ನಿಲಿಸುವೆ ನೀ
ತಾಯ ಪೊಟ್ಟೆಯ ಪೊಕ್ಕರೆಯು ನುಡಿ
ವಾಯತವನರಿತವರು ನಿನ್ನನು
ಬಾಯಿ ತೆರೆಯಲೀಯರು ನಿಧಾನಿಸೆ ವಾಯುಮತವೆ ಮತ ೩೩

ಒಂದು ಚಿತ್ತಿಂದುದಯಿಸು ಮ
ತ್ತೊಂದು ಚಿತ್ಸ್ವಾಸ್ಥಾನದಿಂದಲೆ
ಒಂದು ಭೋಜನ ಜಪತಪ ಧ್ಯಾನಗಳ ಮಾಡಿತೆಲ್ಲೈ
ನಿಂದ್ಯ ದೇಹೋಪಾದಿ ಈ ಸಂ
ಬಂಧಿಸಲು[ಬೇರೊಂದು] ನುಡಿವೀ
ಮಂದನುಕ್ತಿಯು ವೃಥಾಪೋಯಿತು ಅಕೃತಬಂಧನವೆ ೩೪

ಒಂದು ದೇಹದಲೊಂದು ಚಿತ್ಸಂ
ಬಂಧವಲ್ಲದೆ ದೇಶದೇಶದಿ
ಪೊಂದಿಕೊಂಡಿಹ ಚಿತ್ತಿದೊಂದೇ ಜೀವನೆಂಬುವಗೆ
ಮಂದ ಮರಣದಪಾಯವೆಂಬುದು
ಬಂದು ಹೋಯಿತು ಈ ವಿಯೋಗವ
ದೊಂದು ದೇಹಕೆ ಬಹುದು ಚಿತ್ತೇ ವ್ಯಾಪ್ತವೆಂಬುವಗೆ ೩೫

ಜೀವಭೇಧವನಾದಿಯೆಂಬುದ
ದಾವ ಬಗೆಯಲಿ ಬೊಮ್ಮ ತಾನೇ
ಜೀವ ಭಾವವನೈದಿತೆಂಬೀ ನಿನ್ನ ಮೋಹಕವ
ತೀವಿ ನಡೆಸಿದೆ ಬೊಮ್ಮದಂಗಕೆ
ನೋವಕೊಡುವಿಂದ್ರಿಯವ ಕೂಡಿಸಿ
ಜೀವರಾಶಿಗೆ ತೆಗೆವುದೆಂತೋ ನಿರ್ವಿಕಾರವೆಲೆ ೩೬

ಇಂತು ದುರ್ಮತ ಜೀರ್ಣಕಂತೆಯು
ತಂತುವಾಯ್ತು ಮಹಂತರಿದಿರಲಿ
ನಿಂತ ಹೆಜ್ಜೆಯ ನೋಡಿ ನಿಲ್ಲದೆ ಭ್ರಾಂತಿಗೊಳಿಸಿತೆಲ್ಲೈ
ಹಂತನಿವನೆಂತಾದರಾ ವೇ
ದಾಂತ ಪುಸಿ ಪಂಥಗಳನು ಸ
ಭಾಂತರದಲಿನ್ನಾವ ಬಗೆಯಲಿ ನಿಂತು ನಿಲಿಸುವನು ೩೭

ಮುಕ್ತಿಯೆಂಬುದು ಮರ್ತ್ಯರಿಗೆ ಎ

ನ್ನರ್ಥಿಯ ಸ್ಥಾನಗಳು ಭಕ್ತಿಯ
ಶಕ್ತಿಯಿಂದಲಿ ಹತ್ತಿ ಮೃತ್ಯುವನೊತ್ತಿ ಮತ್ಪದದ
ಹತ್ತಿಲೇ ಸುಖಿಸುವುದು ಭೃತ್ಯರಿ
ಗಿತ್ತ ಖೇದವನಿತ್ತು ಮರ್ತ್ಯನು
ವ್ಯರ್ಥ ಪೊಕ್ಕಳಿಸಿದರೆ ನಾನು ಪ್ರಮತ್ತನಲ್ಲವೆಲೆ ೩೮

ಮರ್ತ್ಯ ಮೃತ್ಯುರ್ವ್ಯಾಳ ಭೀತನೆಂ
ಬುಕ್ತಿಯರ್ಥವ ನೋಡು ಮತ್ತದು
ಪ್ರಾಪ್ತಿಯೇ ಕೈವಲ್ಯ ಗಡ ಮೃತ್ಯುವಿಗೆ ಶತ್ರು ಗಡ
ಮತ್ತೆ ಮರುಳಾಗದಿರು ನಾ ಸ
ರ್ವೋತ್ತಮನು ಭೃಗುಮೆಟ್ಟಿದರೆ ಆ-
ನುತ್ತಮೋತ್ತಮ ದಕ್ಷನಾಗಿಯೆ ತಾಳಿಕೊಂಡೆನೆಲೆ ೩೯

ಎಲ್ಲವಿಲ್ಲೆಂಬುವ'ವಗೆ ನುಡಿವುದ
ಕಿಲ್ಲ ನಾಲಿಗೆ ಕೇಳ್ವ ಕರ್ಣಗ
ಳಿಲ್ಲ ಪೇಳ್ವಾಚಾರ್ಯರಿಲ್ಲ ವಿವೇಕವಿಲ್ಲವೆಲೆ
ಕಲ್ಲಕಂಬವ ಪೋಲ್ವ ನಿನ್ನನು
ಬಲ್ಲವರು ಬಲ್ಲಿದರೊಳಪ್ರತಿ
ಮಲ್ಲರೆನ್ನಾಳುಗಳು ಸೋಲಿಸಿ ಜಳ್ಳು ಮಾಡುವರು ೪೦

ಈಗ ಉಂಟಿನ್ನೊಂದು ಕಾಲದಿ
ಪೋಗುವುದು ಜಗವೆಂಬ ನುಡಿ ಎನ
ಗಾಗದೈ ತ್ರೈಕಾಲಿಕ ಪ್ರತಿಷೇಧ'ವೆಂಬುವಗೆ
ಆಗಮವನರಿಯದವನೆನ್ನುತ
ಬೀಗವನು ಬಾಯ್ಗಿಕ್ಕಿ ನಿನ್ನನು
ಪೋಗೆನುತ ಪೊರಗಟ್ಟುವರೆಲೈ ನನ್ನ ಕಿಂಕರರು ೪೧

ಇಷ್ಟದೇವರ ಮಧ್ಯದಲಿ ಮನ
ಮುಟ್ಟಿ ನನ್ನನೆ ಭಜಿಸು ದಿವಿಜರು
ಶಿಷ್ಟ ಜನರಿಗೆ ಗುರುಗಳೆಂದವರಂಘ್ರಿಗಭಿನಮಿಸು
ನಷ್ಟವಾಗದವೋಲು ನಿನ್ನನು
ಗಟ್ಟಿಯಾಗಿಯೆ ರಕ್ಷಿಸುವೆ ನಾ
ದೃಷ್ಟಿಗೋಚರನಹೆನು ಮುಕ್ತಿಯ ಕೊಟ್ಟು ಸಲಹುವೆನು ೪೨

ಎನ್ನ ಗುಣಗಳ ಪೊಗಳುತಿರುವೀ-
ಪೂರ್ಣಪ್ರಜ್ಞರ ಮತವೆ ಸುಮತ ಪ್ರ
ಸನ್ನ ಸುಧೆಸಮ ಭವವಿಮುಕ್ತಿಯ ಪಥವೆ ಸತ್ಪಥವು
ಅನ್ಯಮತಗಳ ಜರಿದು ಈ ಸಂ-

ಪನ್ನ ಮರುತನ ಮತವ ಮನದಲಿ
ಮನ್ನಿಸುತ ಮನನವನು ಮಾಳ್ಪರನಿನ್ನು ಸಲಹುವೆನು ೪೩

ವಾದಿರಾಜಗೆ ದೇವ ಕಲಿಸಿದ
ಮಾಧವನ ಗುಣಮಾಲೆಯನು ಬರೆ-
ದೋದಿ ಪಠಿಸುವ ಮಾನವರಿಗೆ ವಿಮುಕ್ತಿ ಪಥವಹುದು
ವಾದಶಕ್ತಿಯನಿತ್ತು ತನ್ನಯ
ಪಾದಪದ್ಮದ ನೆನಹನೀವ ಮ-
ಹಾದಯಾಂಬುಧಿ ಹಯವದನ ಕೃಪೆಯಿಂದ ಸಲಹುವನು ೪೪

ಇಂತು ಸ್ವಪ್ನಾವಸ್ಥೆಯಲಿ ಮಾ-
ಕಾಂತ ಕರುಣಾವಂತನತಿ ಬಲ-
ವಂತ ಸರ್ವಮಹಂತಮಹಿಮ ದುರಂತ ನೈಜ ಜನ
ಶಾಂತ ಶ್ರೀಗುರು ವಾದಿರಾಜನಿಗೆ
ನಿಂತು ಪೇಳಿದ ಪದಗಳೆ ನಲಿದ
ವಂತರಂಗದಲೊರೆದ ಸಿರಿ ಹಯವದನ ಕೃಪೆಯಾಂತು ೪೫

೩೪೧

**ಅವತಾರತ್ರಯ ಮಧ್ವ ಸುವ್ವಾಲಿ**

ಶ್ರೀರಮಣನಾದ ಶ್ರೀಹರಿಯ ಚರಣಕಮಲಕ್ಕೆರಗಿ
ಅರ್ಚಿಸುವ ಭಾರತೀಶನ ವರುಣರನ ಭಜಿಸುವೆ ಪ.

ಅಮರವರಿಯರೆಲ್ಲ ಕ್ಷೀರಾಬ್ಧಿಯಲ್ಲೇ ಮುಳುಗಿರಲು
ಕಮಲೆರೊಡನೆ ರಮಿಸುವಂಥ ಘನನ ಕಂಡರು ೧

ರಕ್ಷಿಸಯ್ಯ ಲಕ್ಷ್ಮೀಲೋಲ ರಕ್ಷಿಸಯ್ಯ ಭಕ್ತರ ಪಾಲ
ರಕ್ಷಿಸೆಂದು ಪಾಡಿದರು ಕುಕ್ಷಿಲೋಲನ ೨

ಮೀನನಾಗಿ ನಿಗಮಚೋರ ದಾನವರ ಗೆಲಿದು ಬಂದಿ
ದಾನ ಬೇಡಿದವಗೆ ವೇದಾಂತವಿದ್ಯವ ೩

ಮಂದರಾದ್ರಿ ಹಾಕಿ ಜಲಧಿ ಮಥಿಸುತಿರಲು ಕೂರ್ಮರೂಪ
ಅಂದು ಧರಿಸಿದಿ ಅಮೃತ ನಮಗೆ ತಂದು ನೀಡಿದಿ ೪

ವರಾಹನಾಗಿ ಹಿರಣ್ಯಾಕ್ಷನ ಮುಳುಗಿ ಪೋಗಿ ವಧೆಮಾಡಿ
ಧರಣಿ ಎತ್ತಿ ನಮ್ಮನ್ನ ಸಲಹಿದಾತನಲ್ಲವೆ ೫

ಮಗನ ಹಗೆಯು ಕೇಳಿ ದೈತ್ಯ ಮತ್ಸರವ ಮಾಡುತ್ತಿರಲು ನರ-
ಮೃಗ ರೂಪದಿಂದ ಮಗನ ಸಲಹಿದ ೬

ಇಂದ್ರನ್ನ ಲೋಕ ಬಲೀಂದ್ರ ಅಪಹರಿಸುತ್ತಿರಲು ಉ-
ಪೇಂದ್ರನಾಗಿ ತಂದ ಮದಸಾಂದ್ರನಲ್ಲವೆ ೭

ಎರಡುಹತ್ತು ಒಂದುಬಾರಿ ಧರಣಿನಾಯಕರ ಗೆಲಿದು
ಪರಶುರಾಮ ರೂಪವನ್ನು ಪ್ರಕಟಮಾಡಿದಿ ೮

ವೀರಕುಂಭಕರ್ಣ ರಾವಣೇಶ ಮುಖ್ಯ ಸಕಲರನ್ನೆಲ್ಲ
ಯಾಗ ತ್ಯಾಗದಿಂದ ರಾಹುತಿದ್ದನು ೯

ಮಧುರ ಪಟ್ಟಣಕ್ಕೆ ಹೋಗಿ ಮಾವಕಂಸನ್ನ ಕೊಂದು
ತಾಯಿತಂದೆಯರ ಬಂಧನವ ಬಿಡಿಸಿದಿ ೧೦

ಪ್ರೀತಿಯಿಂದ ಬರಲು ಅಪ್ರೀತಿಮಾಡಿದ ಸತಿಯರಿಗೆ

ಖ್ಯಾತನಾಗಿ ಮನಗೊಂಡು ಬೌದ್ಧನಾದನು ೧೧

ಕರುವ ಕಾಯಲು ಹೋಗಿ ತುರಗ ಏರಿಕೊಂಡು
ದುರುಳತನದಲ್ಲಿ ಮೆರೆದ್ಯೊ ನೀನು ಕಲ್ಕ್ಯರೂಪನೆ ೧೨

ಹೋಗಿ ಸುರರು ಮೊರೆಯಿಡಲು ಗರುಡಗಮನನಾದ ರಾಮ
ಹರುಷದಿಂದ ಭಾರತೀಶ ಹನುಮನಾದನು ೧೩

ತಾಯಿ ತಂದೆರ ಮಾತು ಒಪ್ಪಿಸುತಲೆ ದೇವ ಹೋಗಿ
ರಾಘವರ ಚರಣಕಮಲಗಳಿಗೆ ಎರಗಿದ ೧೪

ಮುದ್ರೆಯನ್ನು ಕೊಂಡು ಸಮುದ್ರವನ್ನೆ ದಾಟಿ ಹನುಮ
ಶೀಘ್ರದಿಂದ ಲಂಕಾಪಟ್ಟಣವ ಹೊಕ್ಕನು ೧೫

ಮಾರ್ಜಾಲರೂಪದಿಂದ ಮನೆಮನೆ ಹುಡುಕುತಿರಲು
ಸೀತೆಯಿದ್ದ ಸ್ಥಳವ ಎಲ್ಲ ಹುಡುಕುತಿದ್ದನು ೧೬

ಅಂತಃಪುರದ ಮನೆಯೊಳಗೆ ನಿಂತು ನೋಡಿದ ಹನುಮಂತ
ಮಂಚದಲ್ಲಿ ಮಂಡೋದರಿ ಮಲಗಿದ್ದಳು೧೭

ಸೀತೆ ಎಂದು ಮನದಲ್ಲಿ ತಿಳಿದು ಬಹಳ ಕೋಪದಿಂದ ಹನುಮ
ಕಾಗೆರೇಖೆ ಕೋರೆದಾಡೆ ಅಸುರಿಯ ಕಂಡ ೧೮

ತಾಯಿ ಜಾನಕಿಗೆ ಪಾದದಲ್ಲಿ ಪದ್ಮರೇಖೆ ತಾಯಿ
ತಾಯಿ ಎಂದು ಹನುಮ ವನಕೆ ತೆರಳಿದ೧೯

ಆಡಿದಮಾತಿಗೆ ಆರುಕೋಟಿ ಗೋದಾನ
ಮಾಡಿ ಹನುಮನು ತಾನು ವನಕೆ ತೆರಳಿದ ೨೦

ಅಂದ ಮಾತಿಗೆ ಹತ್ತುಕೋಟಿ ಗೋದಾನ
ಮಾಡಿ ಹನುಮನು ತಾನು ವನಕೆ ತೆರಳಿದ ೨೧

ಮರದ ಕೆಳಗೆ ಸೀತೆ ಇರಲು ಕಂಡು ಹನುಮಂತ
ಅದೃಶ್ಯ ರೂಪದಿಂದ ಮರವನೇರಿದ ೨೨

ಹತ್ತು ತಲೆರಾವಣ ಮುತ್ತಿನ ಮಗುಟವನೆ ಇಟ್ಟು
ರತ್ನ ಪ್ರಭೆಯಿಂದ ಅಸುರ ಇಳಿದುಬಂದನು ೨೩

ವಿಸ್ತಾರದ ಮುತ್ತಿನ ಛತ್ತರಿಗೆ ಹಿಡಿದುಕೊಂಡು

ಸೀತೆಯಿದ್ದ ವನಕೆ ಬಂದು ಕಾಡುತಿದ್ದನು೨೪

ಹಿಂಗನೋಡು ಜಾನಕಿ ಭೂಮಿಸಾಮ್ರಾಜ್ಯ ಕೊಡುವೆ
ಲಂಕಾಲಕ್ಷುಮಿ ನಿನಗೆ ಕೊಡುವೆನೆಂದನು೨೫

ಇತ್ತ ನೋಡು ಜಾನಕಿ ಭೂಮಿಸಾಮ್ರಾಜ್ಯ ಕೊಡುವೆ
ಲಂಕಾಲಕ್ಷುಮಿ ನಿನಗೆ ಕೊಡುವೆನೆಂದನು೨೬

ಆರುಕಾಲಿನ ಮಂಚಕ್ಕೆ ಹವಳದಾ ತಲೆದಿಂಬು
ಒರಗು ಬಾರಾ ಸೀತೆ ಎಂದು ಕರೆಯುತ್ತಿದ್ದನು ೨೭

ಹತ್ತುಕಾಲಿನ ಮಂಚಕ್ಕೆ ಮುತ್ತಿನಾ ತಲೆದಿಂಬು
ಒಪ್ಪು ಬಾರಾ ಸೀತೆ ಎಂದು ಕರೆಯುತ್ತಿದ್ದನು ೨೮

ಆರುಕಾಲಿನ ಮಂಚಕ್ಕೆ ಉರಿಯ ಕೆಂಡವನ್ಹಚ್ಚು
ಒರಗುವೆನು ರಾಮರಾ ತೋಳಿಗೆಂದಳು ೨೯

ಹತ್ತುಕಾಲಿನ ಮಂಚಕ್ಕೆ ಕಿಚ್ಚುಕೆಂಡವನ್ಹಚ್ಚು
ಒಪ್ಪುವೆನು ರಾಮರಾ ತೋಳಿಗೆಂದಳು ೩೦

ಮಂಡೋದರಿ ಕೈಯಿಂದ ಮಂಡೆಯನ್ಹಿಕ್ಕಿಸುವೆ
ದುಂಡುಮಲ್ಲಿಗೆ ಮುಡಿಸಿ ಮಡಿಚೆಲೆಯ ಕೊಡಿಸುವೆ ೩೧

ಪಾವುಡವನ್ಹಾಸೋರು ಚಾಮರವ ಬೀಸೋರು
ನಾರೇರು ಪನ್ನೀರು ಹಿಡಿದು ಕಾವರು ೩೨

ಸುತ್ತಲಿದ್ದ ತ್ರಿಜಟೇರು ಮಿತ್ರೇರೆಲ್ಲ ಒಂದಾಗಿ
ಸೀತೆಯ ಒಂದುಮಾಡಿಕೊಡಿರಿ ಎಂದನು ೩೩

ಸೀತೆ ಒಂದಾಗೋಳೇನೋ ಪಾಪಿರಾವಣನೆ ಕೇಳು
ಸಿಡಿದು ಹೋಗೋ ಕಾಲ ನಿನಗೆ ಸಾರಿತೆಂದರು ೩೪

ನಾಳೆ ಇಷ್ಟೊತ್ತಿಗೆ ಶ್ರೀರಾಮ ಸೇತುವೆಕಟ್ಟಿ
ರಾವಣನ ಹತ್ತು ಶಿರವಗಳೆದು ಬಿಡುವನು ೩೫

ಕಂಡಕನಸು ಹುಸಿಅಲ್ಲ ಮಂದಮತಿ ಮನೆಗ್ಹೋಗು
ಸೀತೆಯ ಬಿಟ್ಟು ಸುಖಿಯಾಗು ಎಂದರು ೩೬

ಅತ್ತಲಿಂದ ರಾವಣ ಹೊಕ್ಕನಾ ಲಂಕೆಯ

ಇತ್ತಲಿಂದ ಹನುಮಂತ ಮರವ ಇಳಿದು ಬಂದನು ೩೭

ಹಿಂದಕ್ಕೊಂದು ಮೃಗವು ಬಂದು ಶ್ರೀರಾಮರನ್ನೆ ಅಗಲಿಸಿತು
ಮುಂದೆ ಅಸುರ ಕಪಿ ಎನಗೆ ಕಳುಹಿಕೊಟ್ಟನು ೩೮

ಅಂಜನೆಯ ಕಂದನು ವಾಯುಕುಮಾರನು
ಬಂದು ರಾಮರ ಮುದ್ರಿಕೆ ಇಟ್ಟು ಎರಗಿ ನಿಂತನು ೩೯

ಉಂಗುರವನ್ನೆ ತೆಗೆದು ಸೀತೆ ಕಂಗಳಿಗೆ ಒತ್ತಿಕೊಂಡು
ಉದರದಲ್ಲಿಟ್ಟು ಶಿರದಲ್ಲಿಟ್ಟು ಕೇಳುತ್ತಿದ್ದಳು ೪೦

ಏನಯ್ಯ ಹನುಮಂತ ಶ್ರೀರಾಮರು ಕ್ಷೇಮವೇ
ಪ್ರೇಮದಿಂದ ಎನ್ನ ಬಹಳ ನೆನೆಯುತಿಪ್ಪರೇ ೪೧

ಹವಳದ ಕುಡಿಯಂತೆ ಹೊಳೆಯುತಿಪ್ಪೊ ರಾಮರು ತಾಯಿ
ನಿಮ್ಮನ್ನೊರತಾಗಿ ಅಯೋಧ್ಯೆ ಒಲ್ಲರು ೪೨

ತಾಯಿ ನಿಮ್ಮನ್ನೊರತಾಗಿ ಕಂಗಳಿಗೆ ನಿದ್ರೆಯಿಲ್ಲ
ಅಯೋಧ್ಯಾಪಟ್ಟಣ ನಮಗೆ ಅಡವಿ ಎಂಬೋರು ೪೩

ತಾಯಿ ನಿಮ್ಮನ್ನು ಹೆಗಲಲಿಟ್ಟು ಶ್ರೀರಾಮರನ್ನೆ ಕೂಡಿಸುವೆ
ತಾಯಿ ಚಿತ್ತೈಸು ಎಂದು ನುಡಿದ ಹನುಮನು ೪೪

ಸುತ್ತಲಿದ್ದ ಕಾವಲು ಬೆನ್ನಟ್ಟಿಬಾಹೊ ಭಟರು ಎಲ್ಲ
ಮರ್ತು ಎನ್ನ ಕೊಂಡು ಹ್ಯಾಂಗ ಶರಧಿ ದಾಟುವಿ ೪೫

ಸಾಲದು ಧೈರ್ಯವು ನೀ ಹೋಗಿ ಹನುಮಂತ ಶ್ರೀ
ರಾಮರೊಡಗೂಡಿ ಬ್ಯಾಗಬಾರೊ ಎಂದಳು ೪೬

ಅಮ್ಮಾ ಹಸಿವೆ ಎಂದೆನಲು ಬಿದ್ದ ಹಣ್ಣ ಮೆಲ್ಲೆನಲು
ಹೆಮ್ಮರವ ಕಿತ್ತಿ ಬಿಸುಟು ಹಣ್ಣ ಮೆದ್ದನು ೪೭

ಸೀತೆಯಿದ್ದ ವನವ ಬಿಟ್ಟು ಮಿಕ್ಕವನಗ'ಳೆಲ್ಲ ಕಿತ್ತು
ಬಾಳೆಯ ವನವ ಕಿತ್ತು ಧೂಳಿಮಾಡಿದ ೪೮

ನಿಂಬೆಯ ವನವ ಕಿತ್ತು ಡಂಬುಮಾಡಿದ ಹನುಮಂತ
ಅಕ್ಷಯ ಕುವರನ್ನ ಕುಟ್ಟಿ ಕೊಡವಿದ ೪೯

ಸುತ್ತಲಿದ್ದ ಕಾವಲು ಕೂಡಿ ಯುದ್ಧವನ್ನೆ ಮಾಡಿ

ಹೋಗಿ ರಾವಣೇಶನ ಮುಂದೆ ಹೇಳಿದರಾಗ ೫೦

ಇಂದ್ರಜಿತು ಬಂದು ಬ್ರಹ್ಮಾಸ್ತ್ರದಿಂದ ಕಟ್ಟಿ
ಕೊಂಡು ಹೋಗಿ ರಾವಣನ ಮುಂದೆ ಇಳಿದರಾಗ ೫೧

ಯಾವ ದೇಶದಿಂದ ಬಂದಿ ಯಾರ ಕಂದಯ್ಯ ನೀನು
ರಾವಣೇಶ ಕೇಳಿದನು ವಾನರೇಶನ ೫೨

ಎನ್ನ ಒಡೆಯ ರಾಮಚಂದ್ರ ಅವನ ಬಂಟನೆಂಬುವರು
ಹೆಮ್ಮೆಯಾನ ಬೇಡ ಶರಣೆನ್ನು ರಾವಣ ೫೩

ತನ್ನ ಬಂಟನಾದರೆ ಭೂಮಿ ಸಾಮ್ರಾಜ್ಯ ಕೊಡುವೆ
ತಳಿಗೆ ತಾಂಬೂಲವನ್ನು ತರಿಸಿಕೊಟ್ಟನು ೫೪

ಕೊಟ್ಟ ತಾಂಬೂಲವನ್ನು ತಟ್ಟೆಗ್ಹಾಕಿದ ಹನುಮ ನಿನ್ನ
ಕುಟ್ಟಿ ಕೆಡಹುವೆ ನಾನೀಗ ಅರಿಯಬಲ್ಲೆಯಾ ೫೫

ಏನಯ್ಯ ಹನುಮಂತ ಬಹಳ ಮಾತನಾಡುತಿದಿ
ರಾವಣೇಶ ಕೇಳಿದನು ರಾಮಹನುಮನ ೫೬

ನಾನಲ್ಲ ಹಿಂದಿನ ಬಾಲವೆ ಮಾತಾಡುತಲಿದೆ
ಲೀಲೆಯಿಂದ ಹನುಮಂತ ಬಾಲವ ತೋರಿದ ೫೭

ಬಾಲಕ್ಕೆ ತಕ್ಕ ಶಿಕ್ಷೆ ನಾನು ಮಾಡಿಸುವೆನೆಂದೆನುತ
ರಾವಣೇಶ ಹೇಳಿದನು ವಾನರೇಶಗೆ ೫೮

ಪಟ್ಟೆಶಾಲುಗಳ ಕೊಕ್ಕು ಬಟ್ಟೆಗಳ ಸೆಳೆದುತಂದು
ಸುತ್ತಿರ್ಹನುಮಂತನ್ನ ಬಾಲಕೆಂದನು ೫೯

ಚಂದ್ರಶಾಲೆಗಳ ಹೊಕ್ಕು ದಿಂಡುಗಳ ಸೆಳೆದುತಂದು
ಸುತ್ತಿರ್ಹನುಮಂತನ ಬಾಲಕೆಂದನು ೬೦

ಮಾಳಿಗೆ ಮನೆಯ ಹೊಕ್ಕು ಸೀರೆಗಳ ಸೆಳೆದುತಂದು
ಸುತ್ತಿರ್ಹನುಮಂತನ ಬಾಲಕೆಂದನು ೬೧

ಎಷ್ಟು ಬಟ್ಟೆ ಸುತ್ತಿದರು ಸುಟ್ಟ ಬಾಲ ಬೆಳೆಯುತಲಿದೆ
ವನವಾಸದ ಸೀತೆಸೀರೆ ತನ್ನಿರೆಂದನು ೬೨

ನುಡಿಗಳಲ್ಲಿ ಏಕೋದಾನ ಮನದ ಕೋಪವನೆ ತಾಳಿ

ಶೀಘ್ರದಿಂದ ಹನುಮಂತ ಬಾಲವ ಮುದುಡಿದ ೬೩

ಇಂದ್ರಜಿತು ಅತಿಕಾಯ ಶಿಶು ಮೊದಲಾದವರು
ಅದ್ದಿ ತೈಲದಿಂದ ಅಗ್ನಿ ಬಾಲಕೆ ಮುಟ್ಟಿಸಿದರು ೬೪

ಮುಟ್ಟಿಸಿದ ಬಾಲ ಉರಿದು ಸುಟ್ಟು ಪಟ್ಟಣವು ಉರಿದು
ಲಂಕಪಟ್ಟಣವು ಉರಿದು ಕುಪ್ಪೆಬಿದ್ದಿತು ೬೫

ಮಾಳಿಗೆ ಮನೆಯು ಉರಿದು ಚಂದ್ರಶಾಲೆಗಳು ಉರಿದು
ವಿಶ್ವಕರ್ಮರು ಕೇಳಿದರು ಯಾರ ಬಂಟನು ೬೬

ಗೋಕುಲದೊಳಗೆ ಹುಟ್ಟಿ ಗೋವುಗಳ ಪಾಲಿಸಿದ
ತಾಟಕಿಯ ಮೂಗುಕೊಯ್ದ ರಾಮರ ಬಂಟನು ೬೭

ಮರಳಿ ಜಲವ ದಾಟಿ ಶ್ರೀರಾಮರ ಪಾದಕ್ಕೆರಗಿ
ಹರುಷದಿಂದ ಮಣಿಯನಿಟ್ಟು ಎರಗಿನಿಂತನು ೬೮

ಹರುಷದಿಂದ ರಾಮಚಂದ್ರ ವಾಯುತನಯನ್ನಪ್ಪಿಕೊಂಡು
ಮನದ ಹರುಷದಿಂದ ಸಂತೋಷಬಟ್ಟನು ೬೯

ವನಕೆ ಬಂದ ದೈತ್ಯರನ್ನೆಲ್ಲ ಎಣಿಕೆಯಿಲ್ಲದೆ ಕೊಂದು ಬಿಸುಟು
ಮನವ ರಕ್ಷಿಸಿದ ನಮ್ಮ ಹನುಮರಾಯನು ೭೦

ರಘುಕುಲೇಶ ರಾಮನಾದ ಯದುಕುಲೇಶ ಕೃಷ್ಣನಾದ
ಹನುಮ ಭೀಮಸೇನ ಕುಂತಿತನಯರಾದರು ೭೧

ಸುವ್ವಿ ಹನುಮಂತ ಸುವ್ವಿ ಸುವ್ವಿ ಭೀಮಸೇನ ಸುವ್ವಿ
ಸುವ್ವಿ ಮಧ್ವರಾಯರಿಗೆ ಸುವ್ವಿಲಾಲಿ ೭೨

ಹುಲಿಗೆ ಬೆದರಿ ಕುಂತಿದೇವಿ ಮಗನಚರಿಸಿ ಬಿಸುಟಿರಾಲು
ಹಲವು ಪರಿಯ ಶಿಖರ ನುಚ್ಚಾಗಿ ಬಿದ್ದಿತು ೭೩

ಭೀಮಸೇನನೆಂಬೊ ದಿವ್ಯನಾಮವನ್ನೆ ಇಟ್ಟರು
ಸೋಮಹಾಕುಲದಲ್ಲಿ ಜನಿಸಿ ಸಾರ್ವಭೌಮನು ೭೪

ಐದುಮಂದಿ ಪುತ್ರರ ಪಡೆದಳಾ ಕುಂತಿದೇವಿ
ಅಡವಿಯೊಳಗೆ ರಾಯ ಅಂತರಿಸಿಹೋದನು ೭೫

ಕಂಡು ವೇದವ್ಯಾಸರು ತಂದು ಮನೆಒಳಗೆ ಇಟ್ಟು

ಕಂದಗಳು ಇವರ ನೀವು ಸಲಹಿರೆಂದರು ೭೬

ಬ್ಯಾರೆ ಮನೆಯನ್ನು ಕಟ್ಟಿ ದಾಯಾದರ ಕಾವಲಿಟ್ಟು
ಓದು ಬರಹದಿಂದ ಇವರನ್ನು ಸಲಹಿರೆಂದರು ೭೭

ಹಲವು ಧರವನೇರಿ ಭೂಪ ಹುಲಿಯುನಗರಿಸಾಲ್ವವೃಕ್ಷ(?)
ತಲೆಯ ಪಾದದಿಂದ ಒದ್ದು ನಗುತ ಹಣ್ಣ ಮೆದ್ದರು ೭೮

ಆರ್ಯಕುಷ್ಟಿ ಮುಷ್ಟಿಯುದ್ಧ ನೀರುಚೆಲ್ಲಾಟವು
ಶೂರ್‍ರಾದರೆ ರಾಯರ್‍ನ ನೀವು ಗೆಲಿಸಿ ಎಂದರು ೭೯

ರಾಷ್ಟ್ರರು ಶಕುನಿಮುಖ್ಯ ದೂತರೆಲ್ಲ ವಿಷವನಿಕ್ಕೆ
ಆತ್ಮದಲ್ಲಿ ಜೀರ್ಣವಾಯಿತು ಅಂಜನೆತನಯಗೆ ೮೦
ಕಲಿಮಂತ್ರದಿಂದ ಜ್ವಾಲೆಗರಳ ಸುರಿವ ಫಣಿಗಳಿಂದ
ಪವನಸುತನ ಕಚ್ಚಿಸುತಿರಲು ಪಚನವಾಯಿತು ೮೧

ಪಾದಶರಗಳಿಂದ ಲೋಹಪಾಶಲಿಂದ ಕಟ್ಟುವರ
ಪ್ರವೇಶದಿಂದ ಕೆಡ'ವಲವನ ಜನಕನೆದ್ದನು ೮೨

ಅರಗಿನ ಮನೆಯು ಮಾಡಿ ಸಾಗಿ ಬಂದು ಬಗೆಯುವರ
ಅರಗುಜಯಿಸಿ ಗೆದ್ದರವರ ಅನುಜ ಪಾರ್ಥರ ೮೩

ಕಕ್ಷದಲ್ಲೆ ಹಿಡಿಂಬಕನ ರಾಕ್ಷಸನ ಕೊಂದು ಪ್ರಮುಖ
ಕಕ್ಷವೃಕ್ಷವನ್ನೇ ಕಿತ್ತು ವೃಕ್ಷತಂದನು ೮೪

ಹಿಡಿಂಬಾಸುರನ ಕೊಂದು ಹಿಡಿಂಬಿಯ ಮದುವೆ ಆಗಿ
ವೇದವ್ಯಾಸರ ವಾಕ್ಯದಿಂದ ಭೀಮ ಮಗನ ಪಡೆದನು ೮೫

ಅರಸುಮಕ್ಕಳು ಸ್ವಯಂವರಕೆ ಸಾಗಿ ಬರುತಿರಲು
ಚಿತ್ರಶಯನ ಗಂಧರ್ವ ಅಡ್ಡಗಟ್ಟಿದ ೮೬

ಅರ್ಜುನನ ಕೂಡ ಯುದ್ಧ ಮಾಡೂದು ಗಂಧರ್ವಕಂಡು
ಅಶ್ವಸಹಿತ ಭಸ್ಮವನ್ನೇ ಮಾಡಿ ಕೆಡವಿದ ೮೭

ಅಂಗಾರಪರ್ಣನೆಂಬೊ ನಾಮಗಂಧರ್ವಗೆ
ಅಶ್ವಗುರುದಕ್ಷಿಣೆಯ ಕೊಟ್ಟರಾಗಲೆ ೮೮

ಧೌಮ್ಯಾಚಾರ್ಯರೊಡಗೂಡಿ ಪಂಚಪಾಂಡವರು ಕೂಡಿ

ನಗರ ಪ್ರವೇಶವನೆ ಮಾಡಿದರಾಗ ೮೯

ಭಿಕ್ಷೆಬೇಡಿ ಬಕನ ಕೊಂದು ವಿಪ್ರರು ನೆರೆದಿರಲು
ಕೃಷ್ಣ ಕಂಡು ಸವ್ಯವಾಚಿ ಎನುತ ನುಡಿದನು ೯೦

ಖಡ್ಗವೆತ್ತಿ ಸಭೆಯೊಳಗೆ ನಿಂತಿರಲು ಬಲರಾಮ
ಅತ್ತೆಯಸೊಸೆ ನಮಗೆ ಏನು ಆಗೋರ್ಳೊ೧

ಕೃಷ್ಣನಾಡಿದ ಮಾತಿಗೆ ನಕ್ಕು ಬಲರಾಮನು
ಮನದ` ಹರುಷದಿಂದ ಸಂತೋಷಪಟ್ಟನು ೯೨

ಖಡ್ಗವೆತ್ತಿ ಸಭೆಯೊಳಗೆ ಬರುವ ಪಾರ್ಥನ್ನ ಕಂಡು
ಬಿಲ್ಲು ಹೊರೆಯ ಹೊರೆಸಿದರು ಫಲ್ಗುಣಗಾಗ ೯೩

ಮುಗುಳುನಗೆಯಿಂದಲೆ ಕಮಲಮುಖಿಯು ಮಾಲೆ ಪಿಡಿದು
ಫಲ್ಗುಣನ ಕೊರಳಿಗ್ಹಾಕಿ ಬದಿಯಲ್ಲಿ ನಿಂತಳು ೯೪

ಸಿಟ್ಟಿನಿಂದ ರಾಯರೆಲ್ಲ ಖಡ್ಗವೆತ್ತಿ ಸಭೆಯೊಳಗೆ
ಭಿಕ್ಷುಕರು ಕ್ಷತ್ರಿಯರ ಪುತ್ರಿ ಒಯ್ವರಾ ೯೫

ಅದೇ ಬಾಣಗಳಿಂದ ಜಗಳಕ್ಹೋದನರ್ಜುನ ಭೀಮ
ಮರವ ಮುರಿದು ಗೆಲಿದ ಕೆಲವು ರಾಯರ ೯೬

ರವಿಸುತನ ಬಾಣಜಯಿಸಿ ಜಗಳಕ್ಹೋದನರ್ಜುನ
ಪಾಂಡುಭೂಪರೈವರು ಕುಂಬಾರನ` ಸಾಲಿಗೆ ಬಂದರು ೯೭

ಸೋದರಮಾವನ ಹಾರಿಸಿದನ`ಂಬರಕ್ಕೆ ಘಾಸಿಯಾ
ಗದ್ಹಾಂಗೆ ಹಸನಾಗಿ ಇಳಿಸಿದ ೯೮

ರವಿಸುತನ ಬಾಣಜಯಿಸಿ ಪಾಂಡು ಭೂಪರೈವರು
*** ಕುಂಬಾರನ ಸಾಲಿಗೆ ಬಂದರು ೯೯

ಬಂದಿರಾ ಕಂದಗಳಿರಾ ಎಂದು ಕುಂತಿ ಕೇಳಲು
ತಂದೆವೆ ತಾಯಿ ನಿಧಾನವೆಂದರು ೧೦೦

ಭಿಕ್ಷೆತಂದೆವೆ ಎಂದು ಸತ್ಯಧರ್ಮ ನುಡಿಯಲು
ಇಟ್ಟುಕೊಂಡು ಐವರು ಉಣ್ಣಿರೆಂದಳು ೧೦೧

ಅನ್ನವಲ್ಲ ತಾಯಿ ಕನ್ಯಾರತ್ನವು ಎಂದು

ಚೆನ್ನಾಗಿ ಯಮಪುತ್ರ ಮಾತನಾಡಿದ ೧೦೨

ಮರೆದು ಮಾತನಾಡಿದಿ ಇವರ ಬಗೆಯು ಎನಗೆ ತಿಳಿಯಲಿಲ್ಲ
ಜಗದೋದ್ಧಾರ ಕೃಷ್ಣ ತಾನೆ ಬಲ್ಲನು ೧೦೩

ಕುಂತಿಮುಖದ ವಾಕ್ಯದಿಂದ ಮಂತ್ರದ ಪ್ರಯೋಗದಿಂದ
ಸಂಪತ್ತು ಉಂಟು ನಮಗೆ ಎಂದು ಸುಖದಲಿದ್ದರು ೧೦೪

ನಮ್ಮಮ್ಮನಾಡಿದ' ಮಾತಿಗೆ ಅನ್ಯಥಾವಾಗದು
ಕನ್ಯೆ ನಮ್ಮೈವರಿಗೆ ಸಲ್ವದೆಂದರು ೧೦೫

ಆಗ ಧೃಷ್ಟದ್ಯುಮ್ನನು ಅವರಾಡಿದ ಮಾತುಗಳನು
ಬಾಗಿಲದ ಮರೆಗೆ ನಿಂತು ಕೇಳುತಿದ್ದನು ೧೦೬

ಆಗ ಧೃಷ್ಟದ್ಯುಮ್ನನು ಅವರಾಡಿದ ಮಾತು ಕೇಳಿ
ಇವರು ಕ್ಷತ್ರಿಯರೆಂದು ಹೇಳಿದನಾಗ ೧೦೭

ಯಾರಾದರೇನು ಶೂದ್ರಾದರೇನು
ಬ್ರಾಹ್ಮರಾಗೊಡವೆ ನಮಗ್ಯಾತಕೆಂದನು ೧೦೮

ಹರುಷದಿಂದ ದ್ರುಪದರಾಯ ಅಂದಣವ ಶೃಂಗರಿಸಿ
ತಂಡತಂಡದಲಿ ಪಾಂಡವರ ಕರೆಯಕಳಿಸಿದ ೧೦೯

ಆಯದುಳ್ಳದರಮನೆಯ ಆಗ ಶೃಂಗರಿಸಿತು
ಅರ್ಜುನ ಹೊಕ್ಕನು ಬಹಳ ಹರುಷದಿಂದಲೆ ೧೧೦

ಹರುಷದಿಂದ ದ್ರುಪದರಾಯ ತನ್ನೆಂಡತಿಯ ಕರೆಯಲ್ಕಳಿಸಿ
ಗಂಗೆಲಿ ಉದಕ ತಾಂಬಾಣವ ತರಿಸಿದ ೧೧೧

ಪಾದ ತೊಳೆಯುವ ಸಮಯದಲ್ಲೆ ಪಂಚಪಾದವನೆ ಕಂಡ
ಚಂಚಲೇಶರಾಯ ತಾ ನಿಂತುಕೊಂಡನು೧೧೨

ಕಂತುಪಿತ ಸ್ವಾಮಿ ಬಂದು ಅವರ ಚಿಂತೆ ಬಿಡಿಸಿ ಕಾಯ್ದು
ತಂಡತಂಡದಲೆ ಪಾಂಡವರ್ಗೆ ಧಾರೆ ಎರೆಸಿದ ೧೧೩

ಬಂಗಾರದ ಗಿಂಡಿಯೊಳಗೆ ಭಾಗೀರಥೀ ಉದಕ ತುಂಬಿ
ಧರ್ಮರಾಯ ಶ್ಯಾಮಲೆಗೆ ಧಾರೆ ಎರೆಸಿದ ೧೧೪

ರನ್ನದ ಗಿಂಡಿಯೊಳಗೆ ನರ್ಮದಾ ಉದಕ ತುಂಬಿ

ಭೀಮಸೇನ ಭಾರತಿಗೆ ಧಾರೆ ಎರೆಸಿದ ೧೧೫

ಮುತ್ತಿನ ಗಿಂಡಿಯೊಳಗೆ ಗೋದಾವರೀ ಉದಕತುಂಬಿ
ಅರ್ಜುನ ಶಚೀದೇವಿಗೆ ಧಾರೆಎರೆಸಿದ ೧೧೬

ಹವಳದ ಗಿಂಡಿಯೊಳಗೆ ಕೃಷ್ಣವೇಣಿ ಉದಕ ತುಂಬಿ
ನಕುಲ ಉಷಾದೇವಿಗೆ ಧಾರೆ ಎರೆಸಿದ ೧೧೭

ಬಂಗಾರದ ಗಿಂಡಿಯೊಳಗೆ ಭಾಗೀರಥಿ ಉದಕ ತುಂಬಿ
ಪುತ್ರಗೆ ಸಹದೇವಗೆ ಧಾರೆ ಎರೆಸಿದ ೧೧೮

ನಾಕು ದಿನದ ಉತ್ಸವ ನಾಗೋಲಿಯ ಮಾಡಿ
ಮನದ ಹರುಷದಿಂದ ಸಂತೋಷಪಟ್ಟನು ೧೧೯

ಮುತ್ತಿನ ಗೊಂಬೆಯನ್ನು ಮಿತ್ರೆದ್ರೌಪದಿ ಉಡಿಯೊಳಗಿಟ್ಟು
ಹಸ್ತಿನಾಪಟ್ಟಣಕ್ಕೆ ಕಳುಹಿದ ೧೨೦

ಹವಳದ ಗೊಂಬೆಯನ್ನು ಹರದಿ ದ್ರೌಪದಿ ಉಡಿಯೊಳಗಿಟ್ಟು
ಹಸ್ತಿನಾಪಟ್ಟಣಕ್ಕೆ ಕಳುಹಿದ ೧೨೧

ಆಗ ಗಾಂಧಾರಿಯು ಮನದಲ್ಲಿ ಕಳವಳಗೊಂಡು
ಬಂದಿತು ಕಂದಗಳಿಗೆ ಮೃತ್ಯು ಎಂದಳು ೧೨೨

ಧರ್ಮವೇ ಮುಖ್ಯವೆಂದು ಧರ್ಮದಿಂದ ರಾಜ್ಯವಾಳಿದ
ಧರ್ಮರಾಯ ತಾನೇ ಯಜಮಾನನಾದನು ೧೨೩

ವ್ಯಾಸಕರ್ಣ ವ್ಯಾಸಪರ್ಣ ವ್ಯಾಸವಾಕ್ಯದಿಂದ ವೇದ
ವ್ಯಾಸರ ವಾಕ್ಯದಿಂದ ಧರ್ಮ ರಾಜ್ಯವಾಳಿದ ೧೨೪

ಆಗ ನಾರದರು ಹೇಳಿದರು ಒಂದು ಮಾತು ಪಾಂಡು
ರಾಯಗೆ ಸ್ವರ್ಗವು ಇಲ್ಲವೆಂದರು ೧೨೫

ಆಗ ಶ್ರೀಹರಿಯನೆ ಭಾಗ್ಯದಿಂದಲೆ ಕರೆಯಕಳಿಸಿ
ರಾಜಸೂಯಯಾಗವನ್ನೆ ಮಾಡು ಎಂದರು ೧೨೬

ರಾಜಶತೃಘ್ನನಾದ ಜರಾಸಂಧನ ವಧೆಮಾಡಿ
ರಾಜಸೂಯದಲ್ಲಿ ಶ್ರೀಕೃಷ್ಣನ ಪೂಜಿಸಿದರು ೧೨೭

ಆಗ ದುರ್ಯೋಧನನ್ನ ಭಾಗ್ಯದಿಂದಲೆ ಕರೆಯಕಳಿಸಿ

ಏನುಮಾಡ್ತೀರಿ ಭಾವ ಕೆಲಸ ಎನುತ ಕೇಳ್ಯಾಳು ೧೨೮

ಬ್ರಾಹ್ಮರಿಗೆ ದಕ್ಷಿಣೆಯ ಬೇಡಿದಷ್ಟು ಕೊಡುವೆನೆಂದ
ಕೃಷ್ಣ ವಿನೋದದಿಂದ ಕೈಹೊಡೆದು ನಕ್ಕನು ೧೨೯

ಭಕ್ಷ್ಯ ತುಪ್ಪ ಕೆನೆಮೊಸರು ವಿಪ್ರರು ಬ್ರಾಹ್ಮರು ಉಂಡು
ಸತ್ಯಧರ್ಮರಾಯನ್ನ ಹೊಗಳುತಿದ್ದರು ೧೩೦

ದ್ಷಿಣೆಯ ಕೊಟ್ಟು ಕೊಟ್ಟು ರಾಯ ರೆಟ್ಟೆಸೋತು ನಿಂತಿರಲು
ಮರಳಿ ತುಂಬಿತು ಧನವು ಮೊದಲಿನಂದದಿ ೧೩೧

ಕೊಟ್ಟು ಕೊಟ್ಟು ಕುರುರಾಯ ರೆಟ್ಟೆಸೋತು ನಿಂತಿರಲು
ಮರಳಿ ತುಂಬಿತು ಧನವು ಮೊದಲಿನಂದದಿ ೧೩೨

ಅಮೃತ ಸ್ನಾನವನೆ ಮಾಡಿ ಹಿಡಿಹೊನ್ನು ದಾನವನೆ ಕೊಟ್ಟು
ಮಡದಿ ಮಕ್ಕಳಸಹಿತ ಮನೆಗೆ ಬಂದರು ೧೩೩

ಬಹಳ ಕಷ್ಟಪಟ್ಟೆ ತಂಗಿ ಎಂದು ಕೇಳಲು ಕೃಷ್ಣ
ನಿಮ್ಮಿಂದ ನಿವೃತವಾಯಿತೆನುತ ನುಡಿದಳು ೧೩೪

ಅಂಗಿಯನ್ನೆ ಮೇಲಕ್ಕೆತ್ತಿ ಬಂದನು ಕುರುರಾಯ
ಕಂಗಳಿಲ್ಲವೆ ಭಾವ ಎನುತ ಕೇಳ್ಯಾಳು ೧೩೫

ಅರಿಯ ಸಭೆಯ ಕುರುರಾಯ ನಡುವೆ ಬಿದ್ದ ನೀರೊಳಗೆ
ದೊಡ್ಡಧ್ವನಿಯ ಮಾಡಿ ಭೀಮ ನಗುತಲಿದ್ದನು ೧೩೬

ಸಿಟ್ಟಿಲಿಂದ ಕುರುರಾಯ ಬಂದನು ತನ್ನ ಮನೆಗೆ
ತಂದೆಯ ಕೂಡ ಮಾತಾಡಕೂತನು ೧೩೭

ಕಪಟಮಹಿಮನಾಗ ನಿರ್ಮಲವಾದ ಮಂಟಪದಲ್ಲೇ
ಅರ್ಥಿಯಿಂದ ಜೂಜ ಬಂದಾಡ ಕುಳಿತರು ೧೩೮

ರಾಯರಾಯರೆಲ್ಲಕೂಡಿ ಹಾರಪದಕಗಳನೆ ಹಾಕಿ
ಅರ್ಥಿಯಿಂದಲಿ ಬಂದಾಡ ಕುಳಿತರು ೧೩೯

ನೀನು ಸೋತರೆ ಕುರುರಾಯ ಹೋಗ್ತೀಯೊ ವನವಾಸಕ್ಕೆಂದು
ಸುತ್ತು ಡಂಗುರವ ಹೊಯ್ಸಿ ಆಡಕುಳಿತರು ೧೪೦

ಮತ್ತೆ ಸೋತರೆ ಕುರುರಾಯ ಹೋಗ್ತೀಯೊ ವನವಾಸಕ್ಕೆಂದು

ಸುತ್ತು ಡಂಗುರವ ಹೊಯ್ಸಿ ಆಡಕುಳಿತರು ೧೪೧

ಆನೆ ಕುದುರೆ ದಳವು ಸಹಿತ ಭರಣ ಭಂಡಾರವೆಲ್ಲ
ಮಡದಿ ದ್ರೌಪದಿಯ ಪಣಕ್ಕಿಟ್ಟು ಸೋತನು ೧೪೨

ಹಿರಿಯ ಅಣ್ಣ ಕಿರಿಯ ತಮ್ಮ ಬೊಗಸೆ ಬಂಟರನ್ನೆಲ್ಲ
ಮಡದಿ ದ್ರೌಪದಿಯ ಪಣಕ್ಕಿಟ್ಟು ಸೋತನು ೧೪೩

ಕಪಟವಾಕ್ಯದಿಂದ ಶಕುನಿ ಖಳರ ಶಪಥ ಮಾಡಿ ಗೆಲಲು
ಆಗ ಹೋದ್ರು ವನವಾಸಕ್ಕೆ ವೀರ ಪಾಂಡುತನಯರು ೧೪೪

ಸಕಲ ಮುನಿಗಳೊಡನೆ ಸುಖದ ಎಂಬೊ ವಿಷ್ಣುಭಕ್ತರಿಗೆ
ಎಂದೆಂದಿಗೂ ಭಯವು ಇಲ್ಲವೊ ೧೪೫

ನೀಚಬುದ್ಧಿಯುಳ್ಳ ದುಷ್ಟ ಪಾಪಿಕೀಚಕನ ಕೊಂದು
ಸಾಕ್ಷಿಮುಖದಿ ವಿರಾಟರಾಯನ ಸಭೆಯಲಿದ್ದರು ೧೪೬

ಕಳೆದು ಸಪ್ತದಿವಸವೆರಡು ಖಳರ ಶಪಥ ಮಾಡಿಗೆಲು
ಬೆರಗುತ್ತಿದ್ದ ಖಳಜನರ ಬೆರಗುಮಾಡಿದ ೧೪೭

ಸೂರ್ಯಮಾನದಿಂದ ದಿನವು ಪೂರ್ತಿ ಆಗಿಲ್ಲವೆಂದು
ನಡೆಯೊ ವನವಾಸಕ್ಕೆಂದು ನುಡಿದ ಕೌರವ ೧೪೮

ಚಿನ್ನದುಂಗರವನಿಟ್ಟು ಬಣ್ಣಶಾಲೆಯನೆ ಹೊದ್ದು
ಚೆನ್ನ ಕೃಷ್ಣ ಬಂದನು ಮಧ್ಯವರ್ತಿಗೆ ೧೪೯

ಐದು ಮಂದಿಗೈದು ಗ್ರಾಮ ಕೊಡಬೇಕೆನುತಲೆ
ಪರಮಾತ್ಮ ಹೇಳಿದನು ಕುರುರಾಯಗೆ ೧೫೦

ಆದಿಯಲ್ಲಿ ಗಳಿಸಲಿಲ್ಲ ಸೂಜಿಗ್ಹೊಂದಿದಷ್ಟು ಭೂಮಿ
ರಾಜತನಯ ರೌದ್ರರಣರಂಗ ಮೆರೆಯಲಿ ೧೫೧

ಈ ಪರಿಯಿಂದ ಅರ್ಥ ಪಾಪಿಸುತರ ಹೃದಯರಕ್ತವನ್ನು
ಭೂಪ ಸುತರು ತಿಳಿದು ಮದದಿ ಎಲ್ಲ ರಣಕೆ ಬಂದರು ೧೫೨

ಗಾಂಧಾರಿಸುತರ ಹೃದಯ ಗದೆಯಿಂದ ಸೀಳಿದನು
ಪರಶುರಾಮಗಾಹುತಿಯ ಕೊಡುತಲಿದ್ದ’ನು ೧೫೩

ಸಿಂಹನಾದದಿಂದ ವೈರಿ ಸಿಂಹನಾದ ಮಾಡುತಿರಲು ನಾರ

ಸಿಂಹಗರ್ಜಿಸಿದ ಭೀಮಸೇನನು ೧೫೪

ನೀರಡಿಸಿದೆ ಗದೆಗೆ ಗಾಂಧಾರಿಸುತರ ರಕ್ತವನ್ನು
ಪಾರಣೆಯ ಮಾಡಿಸಿದ ಪವನತನಯನು ೧೫೫

ಸುವ್ವಿ ಹನುಮಂತ ಸುವ್ವಿ ಸುವ್ವಿ ಭೀಮಸೇನ ಸುವ್ವಿ
ಸುವ್ವಿ ಮಧ್ವರಾಯರಿಗೆ ಸುವ್ವಿಲಾಲಿ ೧೫೬

ಅಚ್ಯುತನ್ನ ಪಾದಧ್ಯಾನ ತಮ್ಮ ಹೃದಯದೊಳಗೆ ಇಟ್ಟು
ತಮ್ಮ ಕೀರ್ತಿ ಮೂರುಲೋಕದೊಳಗೆ ಇಟ್ಟರು ೧೫೭

ಜ್ಞಾನ ಕಲಿಕಾಲವೆಲ್ಲ ಶೂನ್ಯವಾಗಿ ಹೋಗುತಿರಲು
ಶ್ರೀರಮಣನಾಜ್ಞೆಯಿಂದ ಭೀಮ ಮಧ್ವನಾದನು ೧೫೮

ಮಧ್ಯಗೇಹ ಭಟರು ತಪಸು ಮಾಡುತಿಲು ವಾಸುದೇವ
ಉದ್ಧರಿಪ ಮಗನ ಕೊಟ್ಟ ಮಧ್ವರಾಯರ ೧೫೯

ಗರುಡಗಂಬದ ಮೇಲೆ ಮರುಳ ಪುರುಷ ಕುಣಿಕುಣಿದು
ಸರುವಜ್ಞರು ಜನಿಸುತ್ತಾರೆನುತ ನುಡಿದರು ೧೬೦

ಉರ್ವಿಯ ಮೇಲೆ ಇದ್ದ ಶುದ್ಧ ಸಾಧುಜನರಿಗೆ
ಬುದ್ಧಿ ಪ್ರಕಾಶವನ್ನೆ ಮಾಡಿಕೊಡುವರು ೧೬೧

ಭೂಮಿಯಮೇಲೆ ಇದ್ದ ಸಾಧುಸಜ್ಜನರಿಗೆ
ಜ್ಞಾನಪ್ರಕಾಶವನ್ನೆ ಮಾಡಿಕೊಡುವರು ೧೬೨

ನಾಲ್ಕು ತಿಂಗಳಾಗುತಿರಲು ಆ ಶಿಶುವನ್ನೆತ್ತಿಕೊಂಡು
ಪ್ರೀತಿಯಿಂದ ಬಂದಳಾನಂತಶಯನಕೆ ೧೬೩

ಮಗನ ಮನೆಯೊಳಗೆ ಇಳಿಸಿ ಕೆಲಸಕ್ಕೊಳಗ್ಹೋದಳು
ತಡೆದಳೆಂದು ಬಿಕ್ಕಿ ಬಿಕ್ಕಿ ಅಳುತಲಿದ್ದರು ೧೬೪

ಎತ್ತಿಕೊಂಡರೊಲ್ಲರು ಕಚ್ಚುಹೋರಿ ಒದರುತಿರೆ
ಕುಚ್ಚಿದ ಹುರುಳಿಯನ್ನು ತಿನಿಸುತಿದ್ದಳು ೧೬೫

ಎತ್ತಿಗಿಟ್ಟ ಹುರುಳಿಯನು ಚಿಕ್ಕವಗೆ ತಿನಿಸಲು
ಸಿಟ್ಟಿನಿಂದ ಮಗಳನ ಝುಬರಿಸಿಕೊಂಡರು ೧೬೬

ಕೆಲವುತಿಪ್ಪೆ ಕೆರೆಯೊಳು (?) ಹುರುಳಿ ತಿನಲು ವಾಸುದೇವ

ಶ್ರೀಹರಿಯೇ ರಕ್ಷಿಸೆಂದು ಬೇಡಿಕೊಂಡರು೧೬೭

ತಾಯಿ ಆ ಗುಡಿಯ ದೇವರಿಗೆ ಕರವ ಮುಗಿದು
ತೀವ್ರದಿಂದ ಬಂದರಾ ಅನಂತಶಯನಕೆ ೧೬೮

ಇಂದಿರೇಶನ ಪಾದವ ನೆನೆದು ಆನಂದಭರಿತರಾದರು
ವಂದನೆಯ ಮಾಡಿ ಕೈಯ ಮುಗಿದು ನಿಂತರು ೧೬೯

ತವರುಮನೆ ಮದುವೆಯೆಂದು ಪರಮೋತ್ಸಾಹದಿಂದ
ಮಗನ ಮೇಲಿನ್ಹಂಬಲವ ಮರೆತುಬಿಟ್ಟಳು ೧೭೦

ಎರಡು ವರ್ಷವಾಗಲು ಶಿಶುವು ತೊದಲು ನುಡಿಯುತ
ನಡೆದು ಬಂದಿತು ಅನಂತಶಯನಕೆ ೧೭೧

ಎಲ್ಲರೂ ಕಂಡು ಎಲ್ಲಿಗೆ ಪಯಣವೆನಲು
ನಮ್ಮ ಸ್ವಾಮಿದರುಶನಕ್ಕೆ ಬಂದೆವೆಂದರು ೧೭೨

ಚಿಕ್ಕವನ ಕಾಣದೆ ದಿಕ್ಕು ದಿಕ್ಕು ಹುಡುಕುತ
ಚಚ್ಚರದಿ ಬಂದಳೆ ಅನಂತಶಯನಕೆ ೧೭೩

ಬಾಲಕನ್ನ ಕಾಣದೆ ಕೇರಿಕೇರಿ ಹುಡುಕುತ
ಭ್ಯಾಗದಿಂದ ಬಂದಳಾನಂತಶಯನಕೆ ೧೭೪

ಬಾಲಕರ ಕೂಡಿ ಕೊಂಡು ವಿಮಾನಗಿರಿಯಲಾಡುತಿರಲು
ಬಾರೊ ವಾಸುದೇವ ಎಂದು ತಾಯಿ ಮಗನ ಕರೆದಳು ೧೭೫

ತಾಯಿ ಕರೆದಳು ಎಂದು ವಿಮಾನ ಗಿರಿಯ ಧುಮುಕಿ ಬಂದು
ಪಾದ ಊರಿ ಜನರ ಪಾವನ್ನ ಮಾಡಿದರು ೧೭೬

ಮಣಿಮಂತನೆಂಬೊ ದೈತ್ಯ ಮೈಗೆ ಸುತ್ತಿ ಬರುತಿರಲು
ಎಡದ ಪಾದದಿಂದಲವನ ವರೆಸಿಬಿಟ್ಟರು ೧೭೭

ಪವಳದ ವೃಕ್ಷ ತಂದು ತಲೆಕೆಳಗೆ ಮಾಡಿ ಬಿತ್ತೆ
ಕೊನೆ ಕೊಂಬಿನಿಂದ ಫಲಪುಷ್ಪವಾಯಿತು ೧೭೮

ಪಿತೃಋಣವ ಕೇಳಿಬರಲು ಆಡುತಿರಲು ಹುಣಸೆ ಪಿಕ್ಕ
ಎಣಿಸಿಕೊಟ್ರೆ ಮುಕ್ತಿ ಆಯಿತಾಯಿತವರಿಗೆ೧೭೯

ಬಾಲಕರನ ಕೂಡಿಕೊಂಡು ಬಹಳ ವಿಧ್ಯುಕ್ತದಿಂದ

ಕಾಲದಲ್ಲಿ ಮುಂಜವಿಯಾಯ್ತು ಕಮಲನೇತ್ರಗೆ ೧೮೦

ಉಪನಿಷತ್ತು ಓದಿಕೊಂಡು ವನದೊಳಗೆ ಆಡುತಿರಲು
ಕಿವಿಯ ಊದಿ ತಲೆಯ ನೋವು ಬಿಡಿಸಿದ ಗುರುವಿಗೆ ೧೮೧

ರಾಗ'ಮಾತ್ರ ರಾಗವಿಲ್ಲ ಆ ಮಹಾಯೋಗಿಗಳು
ಬೇಗದಿಂದ ಸನ್ಯಾಸಿ ಆಗು ಎಂದರು ೧೮೨

ವರುಷ ನೋಡು ಬಾಲನೀನು ಬಯಸದಿರು ಸನ್ಯಾಸ
ಬಹಳ ತಪಸಿನಿಂದ ನಿನ್ನ ಪಡೆದೆನೆಂದಳು ೧೮೩

ಹಾಲುತುಪ್ಪವ ಕುಡಿದು ಬಹಳ ಕಷ್ಟದಿಂದ ಪಡೆದೆ
ಚಿಕ್ಕವಗೆ ಸನ್ಯಾಸ ಬೇಡ ಎಂದಳು ೧೮೪

ಉಟ್ಟ ಧೋತ್ರವನ್ನೆ ಬಿಚ್ಚಿ ಕಟ್ಟಿಕೊಂಡು ಕೌಪೀನ
ಆನಂದತೀರ್ಥರೆಂಬ ಸನ್ಯಾಸಿಯಾದರು ೧೮೫

ಭಿಕ್ಷುತನವ ಕೊಂಡು ಅಪೇಕ್ಷಿಸಿ ಮಗನ ಪಡೆದೆ ನಮ್ಮ
ರಕ್ಷಣೆಯ ಮಾಡುವವರ ಕಾಣೆನೆಂದಳು ೧೮೬

ವಿಷ್ಣುತೀರ್ಥರೆಂಬೊ ಮಗನ ಕೊಟ್ಟು ತಾಯಿ ಸಂತವಿಟ್ಟು
ಅಪ್ಪಣೆಯ ಕೊಂಡು ಆಶ್ರಮಕೆ ಬಂದರು ೧೮೭

ಶ್ರೀಮದಾಚಾರ್ಯರಿಗೆ ತ್ರಿವಿಕ್ರಮಪಂಡಿತಾಚಾರ್ಯರು
ಪಾದದ ಮೇಲೆ ಬಿದ್ದು ಶಿಷ್ಯರಾದರು ೧೮೮

ಇಂದಿರೇಶ ಶ್ರೀಮದಾನಂದತೀರ್ಥರಪ್ಪಿಕೊಂಡು
ಚಂದದಿಂದ ಏಕಾಂತ ಆಡುತಲಿದ್ದರು ೧೮೯

ಮರಳಿ ಬದರಿಕಾಶ್ರಮಕ್ಕೆ ತೆರಳಿ ಷ ೋದ ಮಧ್ವರಾಯರು
ಪರ್ವತವ ಕಂಡು ಆಶ್ಚರ್ಯಪಟ್ಟರು ೧೯೦

ಪರ್ವತದ ಮಹಿಮೆಯನ್ನು ವರ್ಣಿಸಲು ಸಾಧ್ಯವಿಲ್ಲ
ಗರುಡಶೇಷ ರುದ್ರರಾರಿಂದಲಾದರು ೧೯೧

ಈ ತೀರ್ಥಕ್ಕೆ ಸರಿಯಿಲ್ಲ ಈ ಕ್ಷೇತ್ರಕ್ಕೆ ಸಮವಿಲ್ಲ
ಶಾಸ್ತ್ರೋಕ್ತದಿಂದ ನಿರ್ಣಯ ಮಾಡಿದರು ೧೯೨

ಭರತಖಂಡವನೆಲ್ಲ ಚರಿಸಿ ಮಧ್ವರಾಯರು

ಉಡುಪಿ ಎಂಬೋ ಕ್ಷೇತ್ರಕ್ಕೆ ಬಂದು ವಾಸ ಮಾಡಿದರು ೧೯೩

ಕಡಲ ಮಧ್ಯದಲ್ಲಿ ಒಂದು ಹಡಗು ಬಂದು ನಿಂತಿರಲು
ಕಂಡು ಮಧ್ವರಾಯರು ಕೈಯ ಬೀಸಿದರು ೧೯೪

ಹಡಗು ಬಂದು ದಡಕೆ ಸೇರಿ ಶ್ರೀಮದಾಚಾರ್ಯರಿಗೆ
ಏನುಬೇಡ್ತಿರಿ ಬೇಡಿಕೊಳ್ರಿ ಕೊಡುವೆನೆಂದರು ೧೯೫

ಮುತ್ತುಮಾಣಿಕ್ಯ ಏಕೆ ಚಿನ್ನಬೆಳ್ಳಿ ನಮಗೆ ಏಕೆ
ಬೇಡುವೆವು ಮೂರು ಮಣ್ಣಿನಗಡ್ಡೆ ಎಂದರು ೧೯೬

ಒಂದು ಗಡ್ಡೆ ಹೆಗಲಲ್ಲಿಟ್ಟು ಒಂದು ಗಡ್ಡೆ ಶಿರದಲ್ಲಿಟ್ಟು
ಚಂದದಿಂದ ದ್ವಾದಶಸ್ತೋತ್ರ ಹೇಳುತ ಬಂದರು ೧೯೭

ಮಧ್ಯಮಾರ್ಗದಲ್ಲೇ ಒಂದು ಗಡ್ಡೆ ಬಿದ್ದು ಒಡಭಾಂಡೇಶ್ವರಾಯ್ತು
ಮತ್ತೊಂದು ಗಡ್ಡೆ ಬಿದ್ದು ದುರ್ಗಿ ಜನಿಸಿಹೋದಳು ೧೯೮

ರಜತಪೀಠಪುರದೊಳಾಗ ರಾಜಮಂದಿರವ ಮಾಡಿ
ರಮ್ಯಮೂರ್ತಿ ಕೃಷ್ಣನ ಪ್ರತಿಷ್ಠಿಸಿದರು ೧೯೯

ಕೃಷ್ಣನ ಪ್ರತಿಮೆ ಒಂದು ವಿಠಲನ ಪ್ರತಿಮೆ ಎರಡು
ವರಾಹ ನಾರಸಿಂಹನ ಪ್ರತಿಮೆಯನ್ನೆ ಕೊಟ್ಟರು ೨೦೦

ಎಂಟುಮಠದವರಿಗೆ ಎಂಟು ಮೂರ್ತಿಯನ್ನೆ ಕೊಟ್ಟು
ಸಂತತ ಶ್ರೀಕೃಷ್ಣನನ್ನೆ ಪೂಜಿಸುತ್ತಿದ್ದರು ೨೦೧

ಉಷಃಕಾಲದಲ್ಲೆ ಎದ್ದು ಶ್ರೀಕೃಷ್ಣನ ಪೂಜಿಸಿ
ಸಾಯಂಕಾಲದಲ್ಲೆ ಸುಬ್ರಹ್ಮಣ್ಯಕೆ ಬಂದರು ೨೦೨

ಮಧ್ಯಾಹ್ನ ಕಾಲದಲ್ಲೆ ಮಧ್ಯತಾಳಮಠಕೆ ಬಂದ
ಮಧ್ವರಾಯರ ಮಹಿಮೆ ಮೂರು ಜಗವ ತುಂಬಿತು ೨೦೩

ಕೋಟಿ ಸೂರ್ಯರ ಕಾಂತಿ ಗೋಪುರ ಪ್ರಕಾಶದ ಬೆಳಕು
ವಾಸುದೇವರ ಪಟ್ಟಣದೊಳು ಶೋಭಿಸುತಿದ್ದವು ೨೦೪

ಹರಾನಯನ ಎಂಬುವನ ಪುರದಿ ಸಾಗರದಿ ಹೊಳೆವೊ
ಪರಿಯೀ ಪಟ್ಟಣದೊಳು ಶೋಭಿಸುತಿದ್ದವು ೨೦೫

ಅಂದು ಆ ದೇಶದೊಳಗೆ ಅನಾವೃಷ್ಟಿಯಾಗಿರಲು

ದಂಡಕೋಲು ತಿರುಗಿಸಿ ತೀರ್ಥವನ್ನೆ ಮಾಡಿದರು ೨೦೬

ಸುತ್ತಲಿದ್ದ ಬಾಲಕರೆಲ್ಲ ಒತ್ತಿ ಕಾಲುವೆಯ ಕಟ್ಟಿ
ಬತ್ತವನ್ನೆ ಬೆಳೆದರೀ ಚಿತ್ರಮಹಿಮರು ೨೦೭

ಅಚ್ಯುತನ ಪಟ್ಟಣದೊಳಗೆ ಚಿತ್ರಭೂಸುರರು
ಎಲ್ಲ ಪರಿಪರಿ ಕ್ರೀಡೆಗಳ ಆಡುತಿದ್ದರು ೨೦೮

ಅಚ್ಯುತಪ್ರೇಕ್ಷಾಚಾರ್ಯರ ಚಿತ್ತ ನಿರ್ಮಲವ ಮಾಡಿ
ವಿಷ್ಣು ಸರ್ವೋತ್ತಮನೆಂಬ ಜ್ಞಾನ ತಿಳಿಸಿಕೊಟ್ಟರು ೨೦೯

ಗುರುಗಳ ಮನಸಿನ ಕಲ್ಮಷಂಗಳನೆ ಕಳೆದು
ಗೀತಾ ತಾತ್ಪರ್ಯಭಾಷ್ಯ ಮಾಡಿಕೊಟ್ಟರು ೨೧೦

ವ್ಯಾಖ್ಯಾನ ಕಾಲದಲ್ಲಿ ದೀಪ ಶಾಂತವಾಗಿರಲು
ಜ್ಯೋತಿ ನಿರ್ಮಾಣ ಮಾಡಿದರು ಅಂಗುಷ್ಠದಿಂದಲೆ ೨೧೧

ಶ್ರೀಮದಾಚಾರ್ಯರು ಸ್ನಾನಕ್ಕೆನುತ ಪೋಗಲು
ಹೋಗಿ ನಿಲ್ಲಿಸಿದ ಗಂಗೆ ಪವಿತ್ರಳಾದಳು ೨೧೨

ಮುನ್ನೂರು ಕೊಡ ಹಾಲು ಮೂರುಸಾವಿರ ಹಣ್ಣು ಮೆದ್ದು
ಜೀರ್ಣವನ್ನೆ ಮಾಡಿದರು ವಾಯುತನಯರು ೨೧೩

ಭಕ್ತಜನರ ಮನೆಯೊಳು ಲೆಕ್ಕವಿಲ್ಲದ ಹಣ್ಣುಮೆದ್ದು
ಭಿಕ್ಷೆಯನ್ನು ಕೊಂಡರಾ ಅಕ್ಷಯಾತ್ಮಕ ೨೧೪

ಕತ್ತಲೊಳಗೆ ಜಲವು ವಸ್ತ್ರ ತೋಯದ್ಹಾಂಗ ಬರಲು
ಹರಿಯ(ಯು ?) ಶಿಷ್ಯರ ಕರೆಯ ಕಳಿಸಿದ ೨೧೫

ನಾವು ಇಲ್ಲದೆ ನೀವು ನದಿಯ ಹ್ಯಾಂಗ ದಾಟಿದಿರೆಂದು
ಸುತ್ತಲಿದ್ದ ದೂತರೆಲ್ಲ ಕೇಳುತಿದ್ದರು ೨೧೬

ಜಗವನ್ನೆಲ್ಲ ರಕ್ಷಿಸುವ ಶ್ರೀಹರಿಯು ನಮ್ಮ ರಕ್ಷಿಸುವ
ಅವರಿಗೆ ತಕ್ಕ ಮಾತನಾಡಿ ಮುಂದಕ್ಕೆ ನಡೆದರು ೨೧೭

ಕಳ್ಳರೆಲ್ಲ ಅಟ್ಟಿ ಬರಲು ಕಲ್ಲಾಗಿ ನಿಂತಿರಲು
ಕಲ್ಲು ಎಂದು ಕಳ್ಳರೆಲ್ಲ ತಿರುಗಿ ಹೋದರು ೨೧೮

ಕಾವಿಯ ವಸ್ತ್ರವನ್ನು ಗಂಟುಕಟ್ಟಿ ಬಿಸುಡಲು

ತಮ್ಮ ತಮ್ಮೊಳಗೆ ಬಡಿದಾಡಿ ಮಡಿದರೆಲ್ಲರು ೨೧೯

ಕೇರಳ ದೇಶವ ತೋಡು ಹೋಗು ಎಂದರೆ
ತೋರ್ಸಿಕೊಟ್ರೆ ನಾ ತೋಡುವೆನೆಂದರು ೨೨೦

ತೋರಿಸಿಕೊಡುವೆನೆಂದು ಆಗ ಗುದ್ದಲಿಯ ಹಿಡಿದು
ತೋಡಿ ತೋಡಿದ್ದಾಂಗ ನೆಟ್ಟನಾಗಿ ಹೋಯಿತು ೨೨೧

ಪಾಪಿ ಅಲ್ಲ ಕೋಪಿ ಅಲ್ಲ ಪಾಪಿ ಬೊಮ್ಮನೂ ಅಲ್ಲ ಎಂದು
** ಮಾಯಾವಾದಿ ಮತವ ಮುರಿದು ಬಿಟ್ಟನು ೨೨೨

ಗಂಡು ಆಟ ಎಂಬುವನ ಗದೆಯಿಂದ ಸೀಳಿದರೆ
ತುಂಡುಮುಂಡಾಗಿ ಧರಣಿಮೇಲೆ ಬಿದ್ದಿತು ೨೨೩

ಕೊಕ್ಕಟಾ ದೇಶದೊಳಗೆ ಮುಪ್ಪಿನ ಬ್ರಾಹ್ಮಣಿರಲು
ಕೃಷ್ಣಮೂರ್ತಿ ಮಹಿರ್ಣ(?)ವನ್ನು ಮಾಡಿಸಿದನು ೨೨೪

ಜ್ಞಾನಬೋಧ ಎಂಬುವನ ದೂರಕ್ಕೆ ಓಡಿಸಿ ಶ್ರೀ
ಮನ್ನಾರಾಯಣನೆ ಪರದೇವತೆ ಎನುತ ನುಡಿದರು ೨೨೫

ಅಣುಮಾತ್ರದಿಂದಲ್ಲೆ ತ್ರೀಣುಮಾತ್ರ ಮಾಡಿ ಹಾರಿಸಿ
ಹುಡುಗನ್ನ ಹೆಗಲೇರಿ ದೇವಾಲಯಕ್ಕೆ ಬಂದರು ೨೨೬

ಶ್ರೀಮದಾಚಾರ್ಯರು ಅಷ್ಟಮಿಪರ್ಯಂತ ಎರಡು
ಮುಹೂರ್ತದೊಳಗೆ ಬದರಿಕಾಶ್ರಮಕ್ಕೆ ಬಂದರು ೨೨೭

ಬದರಿಕಾಶ್ರಮಕ್ಕೆ ಬಂದು ಬದರಿನಾರಾಯಣರ
ಪಾದದಾಮೇಲೆ ಬಿದ್ದು ಶಿಷ್ಯರಾದರು ೨೨೮

ವಾಯುದೇವರ ಮೂರವತಾರ ಹೇಳಿಕೇಳಿದವರಿಗೆ
ಸಾಯುಜ್ಯಮುಕ್ತಿ ಕೊಡುವ ಹಯವದನನು ೨೨೯

ಸುವ್ವಿ ಹನುಮಂತ ಸುವ್ವಿಸುವ್ವಿ ಭೀಮಸೇನ ಸುವ್ವಿ
ಸುವ್ವಿ ಮಧ್ವರಾಯರಿಗೆ ಸುವ್ವಿಲಾಲಿ ೨೩೦